# ಆಸೆಯ ಸುಳಿಯಲ್ಲಿ

ಮಲ್ಲಿಕಾ

ಲಕ್ಷ್ಮೀ ಪ್ರಕಾಶನ
ಕಡಿದಾಳ್ ನಿಲಯ, 359, 14ನೇ ಅಡ್ಡರಸ್ತೆ
ಸದಾಶಿವನಗರ, ಬೆಂಗಳೂರು-560 080

# ಆಸೆಯ ಸುಳಿಯಲ್ಲಿ

ಮಲ್ಲಿಕಾ

ಕ್ಷಣಶಃ ಕಣಶ ಶ್ಚೈವ
ವಿದ್ಯಾಮರ್ಥಂ ಚ ಸಾಧಯೇತ್
ಕ್ಷಣ ತ್ಯಾಗೇ ಕುತೋ ವಿದ್ಯಾ
ಕಣತ್ಯಾಗೇ ಕುತಃ ಸುಖಂ ?

॥ ಶ್ರೀಗುರುಪಾದಾರ್ಪಣಮಸ್ತು ॥

# ಆಸೆಯ ಸುಳಿಯಲ್ಲಿ

ಸೌಮ್ಯ ಲಕ್ಷ್ಮಿ

ಲಕ್ಷ್ಮೀ ಪ್ರಕಾಶನ
359, ಕಡಿದಾಳ್ ನಿಲಯ
14ನೇ ಅಡ್ಡರಸ್ತೆ, ಸದಾಶಿವನಗರ
ಬೆಂಗಳೂರು-560 080

# ನಿವೇದನೆ

ಈ ಕಾದಂಬರಿಗೆ ಆರಿಸಿಕೊಂಡ ಕಥಾವಸ್ತು ಭಾರತವರ್ಷದಲ್ಲಿ ಸ್ತ್ರೀಯರ ಸ್ಥಾನಮಾನಗಳನ್ನು ಕುರಿತದ್ದು. ಇಂದಿನ ಪರಿಸ್ಥಿತಿಯನ್ನು ಗಮನಿಸಿದರೆ ಎಂದೆಂದಿಗೂ ನಮ್ಮ ಸಾಮಾಜಿಕ ಸುಧಾರಣೆ ಆಗಲಾರದೇನೋ....! ಯಾವುದೇ ಮಾನದಂಡದಿಂದ ಅಳೆದರೂ ಸ್ತ್ರೀಯರು ದಲಿತರಿಗಿಂತ ದಲಿತರು. ಆರ್ಥಿಕ ಸ್ವಾತಂತ್ರ್ಯ–ವೈಯುಕ್ತಿಕ ಸ್ವಾತಂತ್ರ್ಯ ನಮ್ಮ ರಾಷ್ಟ್ರದಲ್ಲಿ ಅಸಂಬದ್ಧ. ಇಂದಿಗೂ ವರ್ತಮಾನ ಯುಗಧರ್ಮದ ಸಾರಾಸಾರ ಏನೆಂಬುದನ್ನು ಅರ್ಥೈಸಲಾರದಷ್ಟು ಮಂದಗಾಮಿತ್ವ ನಮ್ಮದು. ರಾಷ್ಟ್ರದ ಮುನ್ನಡೆಗೆ ತೀರಾ ಕಾಲ್ತೊಡಕಾಗಿರುವ ಅಜ್ಞಾನ–ಅನೀತಿ–ಅನ್ಯಾಯ–ಅನಾಚಾರಗಳ ಪಿಡುಗು ರಾಷ್ಟ್ರವ್ಯಾಪಿಯಾಗಿರುವುದು ದುರದೃಷ್ಟಕರ.

ಈ ರಾಷ್ಟ್ರ ಇನ್ನೊಂದು ಶತಮಾನದ ಅಂತರದಲ್ಲೂ ನಾಗರಿಕ ಪ್ರಪಂಚಕ್ಕೆ ಸರಿಸಾಟಿಯಾಗುವುದೆಂದು ನಂಬುವುದು ಕಷ್ಟವೇ. ಸಾಮಾಜಿಕ ಹಿನ್ನಡೆಗೆ ರಾಜಕೀಯ ಮುತ್ಸದ್ದಿತನ ಮುಖ್ಯಕಾರಣ. ವಿದ್ಯೆಬುದ್ಧಿಗಳಲ್ಲಿ ಸಮಾನತೆ ಹೊಂದಿರುವ ಹೆಂಗಳೆಯರು ಕೂಡ ಇಂದಿಗೂ ಪುರುಷ ಸಮಾನತೆಯನ್ನು ಪಡೆಯದಿರುವುದು ನಮ್ಮಲ್ಲಿ ನಿವಾರಿಸಲಾಗದ ಕುಂದು. ಪುರುಷ ಪ್ರಧಾನವಾದ ರಾಷ್ಟ್ರ. ಪುರುಷ ಪ್ರಧಾನವಾದ ಸೂತ್ರ. ಜನಾಂಗದ ಅರ್ಧಭಾಗವಾದ ಸ್ತ್ರೀಯರ ಹಿಂಜರಿಕೆಯಿಂದ ರಾಷ್ಟ್ರದ ಪ್ರಗತಿಗೆ ಪ್ರತಿಬಂಧಕ. ಇದನ್ನು ಸಮಾಜದ ಪಿತೃವರ್ಗವೂ ರಾಜಕೀಯ ಮುತ್ಸದ್ದಿಗಳೂ ಗಮನಕೊಡದೆ ಹೋದರೆ ನಾವು ನಮ್ಮ ರಾಷ್ಟ್ರಎಂದೆಂದಿಗೂ ಹೀಗೆಯೇ....ಸೋಮಾರಿಗಳ ಲಾಂಛನ ಹೊತ್ತುಕೊಳ್ಳಬೇಕು, ಅಷ್ಟೆ.

ಸರಕಾರಕ್ಕೆ ಸತ್ ಸಾಹಿತ್ಯೋದ್ಧಾರದ ಕಡೆ ಗಮನ ಹರಿಸುವಷ್ಟು ಸಹನೆ–ಸಮಯ ಎರಡೂ ಇಲ್ಲವಾದುದರಿಂದ ಕವಿಗಳ ಜೀವನ ಇಕ್ಕಳದಲ್ಲಿ ಸಿಕ್ಕಿದ ಗೋಸುಂಬೆ. ಇನ್ನಾದರೂ ಸರಕಾರ ಕಣ್ತೆರೆಯದಿದ್ದರೆ ನಮ್ಮ ಲೇಖನಿಯ ಮಸಿ ಹಿಂಗಿ ಹೋಗುವುದರಲ್ಲಿ ಸಂಶಯವಿಲ್ಲ.

ಮಲ್ಲಿಕಾ

# ಆಸೆಯ ಸುಳಿಯಲ್ಲಿ

## ೧

ಆವಾವ ಜನ್ಮಗಳ ಯೋಗಾಯೋಗಮೋ
ಈ ಜೀವನ ಮಾರ್ಗಯೋಗದ ಬುನಾದಿ....

–೦–

.... ಪ್ರಾತಃಕಾಲೀನ ಶೀತಲ ವಾತಾವರಣ ಮಂಜುಮಯ.

.... ಮೂಡಣ ದಿಗ್ದೇಶದಲ್ಲಿ ಉಜ್ವಲ ರವಿ ಇನ್ನೂ ಉದಿಸುವುದರಲ್ಲಿದ್ದಾನೆ.

ಮೋಹಿನಿ ಮುಂಬಾಗಿಲನ್ನು ತೆರೆದು ಹೊಸ್ತಿಲು ದಾಟದೆ ಹಾದಿಯ ಕಡೆ ನೋಟವನ್ನು ಚೆಲ್ಲಿಕೊಟ್ಟಳು. ಆ ಹಾದಿ ಬರೀ ಹಾದಿ ಮಾತ್ರ. ಒಂದು ವಾರದ ಹಿಂದೆ ಬರಬೇಕಾಗಿದ್ದ ಗೋಪು ಇಂದೂ ಬರಲಿಲ್ಲ. ಬೆಳಗಿನ ರೈಲಿಗೆ ಬಂದಿದ್ದರೆ ಇಷ್ಟರೊಳಗೆ ಇಲ್ಲಿರಬೇಕಾಗಿತ್ತು. ಕಾಗದವೂ ಇಲ್ಲ, ಸುದ್ದಿಯೂ ಇಲ್ಲ ಎಂದು ಕೊರಗಿತು ಮನಸ್ಸು.

ಗೋಪು ಉತ್ತರದತ್ತ ಇಬ್ಬರ ಜೊತೆಗಾರ ಪೋಲಿಸರೊಂದಿಗೆ ಧಾವಿಸಿ ಎರಡು ವಾರಗಳು ಸಂದು ಹೋದುವು. "ನಾಲ್ಕಾರು ದಿನಗಳಲ್ಲೇ ಹಿಂದಿರುಗುವೆ" ಎಂದಿದ್ದ ಕೂಡ.

ಮನಸ್ಸು ಯೋಚನೆಗೊಳಗಾಯಿತು. ಮೋಹಿನಿ ಸ್ವಲ್ಪ ಹೊತ್ತು ನಿಂತು ನೋಡಿ ಹಿಂದಿರುಗಿದಳು. ಹಾಸಿಗೆಯಿಂದಲೇ ಕೇಳಿದಳು ಸಕ್ಕೂ "ಅಪ್ಪ! ಇಂದೂ ಬರಲಿಲ್ಲವೇ?"

"ಇಲ್ಲ ಮಗಳೆ! ಅಕ್ಕಿ ಬೇಳೆ ಇಲ್ಲವೇ ಇಲ್ಲ. ಏನು ಮಾಡಲಿ ಹೇಳು?"

"ಹಿಂದೆ ಎರಡು ಬಾರಿ ಪ್ರಯತ್ನಿಸಿ ಕಳ್ಳನನ್ನು ಹಿಡಿಯಲು ಸಾಧ್ಯವಾಗದೆ ಬಹುಮಾನ ಬಡ್ತಿ ಎರಡೂ ಕೈ ತಪ್ಪಿದುದು ಈ ಸಲಿ ಹಿಡಿಯಲೇ ಬೇಕೆಂಬ ಹಠಕ್ಕೆ ಕಾರಣವಾಗಿರಬಹುದು. ನೋಡೋಣ, ಅಪ್ಪ ಈ ಸಲಿ ಜಯಗಳಿಸಿದರೆ ಒಳ್ಳೆಯದೆ."

ಸಣ್ಣ ಹುಡುಗಿಯ ಆಶಾಭಾವನೆ ಅಂತರಂಗವನ್ನು ಮುಟ್ಟಿತು. ಒಂದೆರೆಡು ಕ್ಷಣ ಆಲೋಚನಾ ಮಗ್ನಳಾದಳು ಮೋಹಿನಿ. ಪೋಲೀಸ ವೃತ್ತಿ ಅಪಾಯಕರ. ಕತ್ತಿ, ಚೂರಿ ತಲೆಯ ಮೇಲೆ ಸದಾ ನೇತಾಡುತ್ತಿರುತ್ತವೆ ಎಂದು ಕಳಕಳಿಯಿಂದ ಬಿತ್ತರಿಸಿತು ಮನಸ್ಸು.

ಸಕ್ಕೂ ಸ್ವಲ್ಪ ಹೊತ್ತು ಸುಮ್ಮನಿದ್ದು ಅನಂತರ ನುಡಿದಳು. "ರೊಟ್ಟಿ ಬೇಕರಿಯಲ್ಲಿ ಕೆಲಸ ಮಾಡಿಕೊಟ್ಟರೆ ರೊಟ್ಟಿಸಿಗುತ್ತೆ. ನಾನು ಮಕ್ಕಳನ್ನು ನೋಡಿಕೊಳ್ಳುವೆ. ನೀನು ಕೆಲಸ ಮಾಡಿ ರೊಟ್ಟಿ ತೆಗೆದುಕೊಂಡು ಬಾಮ್ಮ!"

"ನಿನಗಿಂದು ಟೆಸ್ಟ್ ಉಂಟಪ್ಪೆ?"

"ಅದಕ್ಕೇ ಹೇಳಿದ್ದು ಮಕ್ಕಳನ್ನು ನೋಡಿಕೊಳ್ಳುವೆ ಎಂದು. ನಾನು ಓದಿಕೊಂಡು ಹಾಗೇ ಶಾಲೆಗೆ ಹೋಗುವೆ. ನೀನು ಅಷ್ಟರೊಳಗಾಗಿ ಬಂದು ಬಿಡು."

"ಆ ದೊಡ್ಡ ದೊಡ್ಡ ಪಾತ್ರೆಗಳನ್ನು ಉಜ್ಜಲು ನನ್ನಲ್ಲಿ ಶಕ್ತಿಯೆ ಇಲ್ಲ. ಹಿಂದೆ ಎಷ್ಟಾದರೂ ಕೆಲಸ ಮಾಡುತಿದ್ದೆ. ಈಗ ನನ್ನ ಗತಿ ನೋಡು ಕಳಕಳಿಯಿಂದ ನುಡಿ ಹೊರಬಿತ್ತು.

"ಆ ಮಾತಿಗೆ ಏನನ್ನೋ ಹೇಳಲು ಪ್ರಯತ್ನಿಸಿ ಸುಮ್ಮನಾದಳು ಸಕ್ಕೂ."

"ನಾನು ಅದನ್ನು ಬಿಟ್ಟರೆ ಬೇರೆ ಗತಿಯೇ ಇಲ್ಲ. ಬೇಕರಿಯವರು ತಿಳಿದವರಾದ್ದರಿಂದ ಹೇಗೂ ನಡೆದೀತು. ಗೋಪು ಬರದಿದ್ದುದು ಚಿಂತೆ"

"ಬಡ್ತಿ, ಬಹುಮಾನ ಎರಡೂ ತರಬೇಕಲ್ಲ?" ವ್ಯಂಗ್ಯವಾಗಿ ನುಡಿದಳು ಸಕ್ಕು.

"ತಿರುಕನ ಕನಸು"

ಮೈ ಮುದುಡಿ ಮಲಗಿದ್ದ ನೀನಾ–ಮೀನಾ ಇವರಿಗೆ ಎಚ್ಚರವೇ ಇಲ್ಲ.

* * *

ಬೆಳಗಿನ ರೊಟ್ಟಿಯ ಸಂಪಾದನೆ ಎರಡು ಹೊತ್ತನ್ನು ಪೂರೈಸಿತ್ತು. ಇನ್ನು ರಾತ್ರಿ ಭೋಜನಕ್ಕೆ ಡಬ್ಬಿಯ ತಳದಲ್ಲಿ ಉಳಿದಿದ್ದ ಅರೆ ಪಾವು ಅಕ್ಕಿಯೇ ಆಧಾರ. ನೀನಾ –ಮೀನಾ ಆಗಲೇ ಹಸಿವಿನಿಂದ ತಳಮಳಿಸಿವೆ. ಇನ್ನೂ ಕೆಲವು ದಿನ ಉಪವಾಸವಿರುವುದೆಂದರೆ ಏನು ಗತಿಯೋ....ಎದೆಯ ತಳಮಳ ಧೃತಿಗೆಡಿಸಿತು. ಮೋಹಿನಿ ಪ್ರತಿದಿನವನ್ನೂ ಹಾದಿಯ ಕಡೆ ನೋಡುತ್ತಲೇ ಕಳೆದಿದ್ದಾಳೆ.

ಅನೇಕ ವೇಳೆ ಏನಾಗಿದೆಯೋ, ಯಾವ ಗಂಡಾಂತರವೋ ಎಂಬ ಕಳವಳವನ್ನು ಮೆಲುಕು ಹಾಕುತ್ತದೆ ಮನಸ್ಸು. ಎಷ್ಟೆಷ್ಟು ಆ ಯೋಚನೆಯಿಂದ ವಿಮುಖವಾಗಲು ಪ್ರಯತ್ನಿಸಿದರೂ ಆ ದುರ್ದಮನೀಯ ಬಿಂದುವಿನಲ್ಲಿ ನಿಲ್ಲುತ್ತದೆ ಮನಸ್ಸು. ಮೋಹಿನಿ ತತ್ತರಿಸಿ ಹೋಗುತ್ತಾಳೆ.

ನೀನಾ–ಮೀನಾ ಮೆಟ್ಟಲಿನ ಮೇಲೆ ಕುಳಿತು ಕಲ್ಲಾಟದಲ್ಲಿ ತೊಡಗಿದ್ದುದು ನಿಶ್ಚಿಂತೆ. ಸಕ್ಕು ಪುಸ್ತಕಗಳನ್ನು ಜೋಡಿಸುತ್ತ "ನೀನೇಕೆ ಅಷ್ಟೊಂದು ಚಿಂತೆ ಹಚ್ಚಿಕೊಳ್ಳಬೇಕು? ನಾವು ಅಪ್ಪ ಬರುವ ತನಕ ಕಾಯಬೇಕಿಲ್ಲ. ಆಫೀಸಿಗೆ ಹೋಗಿ ಕೇಳಿದರೆ ಅರ್ಧ ಸಂಬಳ ಕೊಟ್ಟಾರು...."

"ಇಂದು ನಾಳೆ ಬರಬಹುದು ಎಂಬ ಯೋಚನೆಯಲ್ಲಿಯೇ ಇಷ್ಟು ದಿನ ಕಳೆದು ಹೋಯಿತು. ನೋಡೋಣ. ನಾಳೆಯೊಳಗಾಗಿ ಬರದಿದ್ದರೆ ಮುಂದಿನ ಕ್ರಮ ; ಅಲ್ಲಿಯವರೆಗೆ ಬೇಕರಿಯಲ್ಲಿ ಕೆಲಸ"

"ಅಷ್ಟು ಸಮಾಧಾನ ಇರುವಾಗ ಚಿಂತೆಯೇಕೆ"

"ಚಿಂತೆ ಏನಿಲ್ಲ ಬಿಡು......"

ಮೋಹಿನಿ ಬೇಕರಿಯಿಂದ ತಂದ ಹಳೆ ರೊಟ್ಟಿಯ ಪುಡಿ, ಸಾರು ನಾಲ್ಕು ತಟ್ಟೆಗಳಿಗೆ ಹಂಚಿದಳು. ಮಕ್ಕಳ ಕಣ್ಣಿನ ಹಸಿವೆ ಹೊಟ್ಟೆಯ ಹಸಿವೆ ಅದರಿಂದ ಹಿಂಗಲಿಲ್ಲವೇನೋ, ಕಣ್ಣುಗಳು ಪಾತ್ರೆಯತ್ತ ನೋಡುತ್ತಲೇ ಇವೆ. ಆ ಹಸಿದ ಮಕ್ಕಳನ್ನು ನೋಡಿದರೆ ಒಡಲೆಲ್ಲಾ ಸಂಕಟ.

ನೀನಾ–ಮೀನಾ ಅವಳಿ ಮಕ್ಕಳು. ಅವು ಹುಟ್ಟಿದಾಗ ಎರಡೂ ಹೆಣ್ಣು ಮಕ್ಕಳೆಂದು ತಿಳಿದೊಡನೆಯೇ ಗೋಪು ಮೂರು ದಿನ ಮಡದಿಯ ಮುಖ ನೋಡಿರಲಿಲ್ಲ. ಮೂರು ಹೆಣ್ಣು ಮಕ್ಕಳನ್ನು ಹೆತ್ತಳೆಂದು ಅವಳ ಮೇಲೆ ಎಲ್ಲಿಲ್ಲದ ಆಕ್ರೋಶ. ಪೌಷ್ಟಿಕ ಆಹಾರಾಭಾವದಿಂದ ತಾಯಿ ಮಕ್ಕಳು

ನಲುಗಿದರೂ ಗಮನಿಸಲಿಲ್ಲ ಗೋಪು. ಅವಳೇ ಸಾಧ್ಯವಾದಾಗಲೆಲ್ಲಾ ಕೂಲಿ ಮಾಡಿ ಬೇಕರಿಯಿಂದ ರೊಟ್ಟಿ ತಂದರೆ ಐದು ಮಂದಿಗೆ ಹಂಚಿಕೆ. ಗೋಪು ಎಂದೂ ಧಾರಾಳಿಯಲ್ಲ. ಕೆಲವು ದುಶ್ಚಟಗಳೂ ಉಂಟು. ದುಡಿಮೆಯಲ್ಲಿ ಬಹುಭಾಗ ವ್ಯರ್ಥವ್ಯಯ. ಅದರ ಬಗ್ಗೆ ಮಡದಿ ಸೊಲ್ಲೆತ್ತುವಂತೆಯೂ ಇರಲಿಲ್ಲ. ತುಂಬಾ ಮುಂಗೋಪಿ–ನಿಷ್ಠೂರವಾದಿ. ಗೌರವ–ಘನತೆಗಳನ್ನು ಅರಿಯದವ. ನಯ ವಿನಯಗಳು ಮೈಲಿ ದೂರ. ಮೈನೆತ್ತರ ಝುರಿಯಲ್ಲಿ ಹರಿಯುವುದು ಕೋಪ–ತಾಪಗಳ ಕಾಲ ಕೂಟ.

ಮೋಹಿನಿ ಅವನ ಕಾಕಿಯ ಕವಚದೊಳಗೆ ಹೃದಯ ದ್ರವ್ಯ ಇಲ್ಲವೇ ಇಲ್ಲ ಎಂಬುದನ್ನು ಕಂಡುಕೊಂಡಾಗಲೇ ತನ್ನ ಆಸೆ–ಆಕಾಂಕ್ಷೆಗಳನ್ನು ಬದಿಗಿಟ್ಟು ಯಾಂತ್ರಿಕ ಜೀವನಕ್ಕೆ ಸಿದ್ಧಳಾದಳು. ಆದರೂ, ಮನಃಬುದ್ಧಿಗಳು ಆಹತ. ಭವ್ಯ ಭವಿಷ್ಯದ ಕನಸು ಮುರಿದು ಬಿದ್ದ ಕಳಶ. ಚಿಂತೆ–ಚಿಂತೆ;ಕೊನೆಗಾಣದ ಚಿಂತೆ.

ಕಾಲೇಜಿನ ಎರಡನೇ ವರ್ಷದ ವಿಜ್ಞಾನ ಪರೀಕ್ಷೆಗೆ ಕೂಡುವ ಮೊದಲೇ ತಂದೆ ತೀರಿಕೊಂಡುದುದರಿಂದ ಆ ಆಘಾತವನ್ನು ತಾಳಲಾರದೆ ತಾಯಿ ಹಾಸಿಗೆ ಹಿಡಿದಳು. ಪರೀಕ್ಷೆಯ ಕಡೆ ಮನಸ್ಸು ಸೆಳೆಯುತಿದ್ದರೂ ಮನೆಯಲ್ಲುಳಿದು ತಾಯಿಯ ಶುಶ್ರೂಷೆ ಮಾಡಿದ ಚಿತ್ರ ಇದೀಗ ನಡೆದಂತೆ ಚಿತ್ತಭಿತ್ತಿಯ ಮೇಲೆ ಸುಳಿಸುಳಿದಳಿಯಿತು. ಅಮ್ಮ ಎದೆಗೆಟ್ಟು ಹಾಸಿಗೆ ಹಿಡಿದು ತಿಂಗಳೊಳಗೇ ಅಪ್ಪನ ಹಾದಿ ಹಿಡಿದಳು. ಅವಳಂದು ಸ್ವಲ್ಪ ಸ್ವಲ್ಪ ಧೈರ್ಯ ತೆಗೆದುಕೊಂಡಿದ್ದಿದ್ದರೆ ಖಂಡಿತ ನನ್ನ ಬಾಳಿಗೆ ಆಸರೆ ಯಾಗುತಿದ್ದಳು. ಮಗ–ಸೊಸೆಯರ ಕ್ರೂರವರ್ತನೆ–ದುಷ್ಟಪ್ರವೃತ್ತಿ ತಮ್ಮ ತುತ್ತಿಗೆ ಗಾಣವಾಗಿದ್ದುದನ್ನು ಅರಿತು ನುರಿತ ತಾನೂ ಸತ್ತರೆ ಮಗಳು ಹಾದಿಯಲ್ಲಿ ಬೀಳುತ್ತಾಳೆ ಎಂಬುದನ್ನು ತಿಳಿದಿದ್ದೂ ಸಗ್ಗದ ಹಾದಿ ಹಿಡಿದಳು....ನಾನು ಒಂದೇ ತಿಂಗಳಲ್ಲಿ ತಬ್ಬಲಿಯಾದೆ. ಅಮ್ಮನ ಪ್ರಜ್ಞೆ ಅಳಿಯುವ ಮುನ್ನ ಕಿವಿ ಓಲೆ ಕೈ ಬಳೆ ಸರ ಎಲ್ಲವನ್ನೂ ಎತ್ತಿಕೊಂಡಳು ಅತ್ತಿಗೆ. ಅಮ್ಮನ ಒಳ್ಳೆಯ ಸೀರೆ ಒಂದೂ ಉಳಿಯಲಿಲ್ಲ. ಅತ್ತಿಗೆಯ ಕಾಟ, ಅಣ್ಣನ ಧೋರಣೆ ತಾನಲ್ಲಿ ಒಂದು ಗಳಿಗೆ ಉಳಿಯುವುದೂ ಕಷ್ಟವೇ ಎಂಬ ಭಂಗ ಬವಣೆಗಳಲ್ಲಿ ತೊಳಲಾಡಿದ್ದಳು ಮೋಹಿನಿ. ಶಾಲಾ

ಗೆಳತಿಯರಾದ ಕಮಲ-ಸುಮನಾ ಇಬ್ಬರೂ ಮದುವೆಯಾಗಿ ಪತಿಗೃಹಕ್ಕೆ ಹೋಗಿದ್ದುದರಿಂದ ಸಾಂತ್ವನದ ಒಂದು ನುಡಿಯೂ ತನ್ನ ಕಿವಿಯನ್ನು ಮುಟ್ಟಲಿಲ್ಲ.

ಹಗಲೆಲ್ಲಾ ಕಸಮುಸುರೆಯಲ್ಲಿ ಕಳೆಯುತಿದ್ದುದರಿಂದ ಹೊತ್ತು ಉರುಳಿದುದರ ಪರಿವೆ ಇರುತ್ತಿರಲಿಲ್ಲ. ರಾತ್ರಿ ತಾನೊಬ್ಬಳೇ ಒಂದು ಮೂಲೆಯಲ್ಲಿ ಬಿದ್ದು ಕೊಂಡಿರುವಾಗ ಕಂಬನಿಯ ಕೋಡಿ ಹರಿದು ದಿಂಬು ತೊಯ್ಯುತಿತ್ತು. ಗಾಣದೆತ್ತಿನ ದುಡಿತ. ಅಣ್ಣನ ಐದು ಮಕ್ಕಳನ್ನೂ ಸಾಕಿ ಬೆಳಸಿದ್ದು ತಾನೇ. ಅಷ್ಟಾದರೂ ಲವಲೇಶವೂ ಕರುಣೆ ಮೂಡಲಿಲ್ಲ. ವಸಂತ್ ಒಂದು ವೇಳೆ ಜೀವನಭಾಗಿಯಾಗಿದ್ದಿದ್ದರೆ ನನ್ನ ಬಾಳು ಬಂಗಾರವಾಗುತಿತ್ತು. ನಾನು ನತದೃಷ್ಟೆ....

ಆಗಾಗ ಪ್ರಸಂಗೋಚಿತವಾಗಿ ವಸಂತ ಬಂಗಾಲಿ ಹುಡುಗಿಯನ್ನು ಮದುವೆಯಾಗಿದ್ದಾನೆ ಎಂದೆಲ್ಲಾ ಸುಳ್ಳು ಹೇಳಿ ನನ್ನನ್ನು ಹೊಂಡ ಹಾರಿಸಿದ್ದು ಅಣ್ಣ ಅತ್ತಿಗೆ.

ಅತ್ತಿಗೆ ವಿಚಾರ ಹೇಗಾದರೂ ಇರಲಿ, ಇಬ್ಬರು ಅಕ್ಕ ತಂಗಿಯರನ್ನು ಕಳೆದುಕೊಂಡಿದ್ದ, ತಂದೆ-ತಾಯಿಯನ್ನು ಕಳೆದುಕೊಂಡಿದ್ದ ಅಣ್ಣನಿಗೆ ಇದ್ದವಳು ನಾನೊಬ್ಬಳೇ ಅವನ ಭಾಗಕ್ಕೆ. ಆದರೂ ಅವನು ನಿಷ್ಕಾರುಣ್ಯದಿಂದ ನನ್ನನ್ನು ಇಂಥ ಅನೀತಿಯ ಅನಾಗರಿಕನಿಗೆ ಕಟ್ಟಿಕೊಟ್ಟದ್ದು ಎಂತಹ ಹೇಯ ಕೃತ್ಯ? ಹೋಗಲಿ, ಅಣ್ಣ-ಅತ್ತಿಗೆ ನಿಕೃಷ್ಟವಾಗಿ ಕಂಡರು. ಅದು ಹೀನ ಗುಣ, ದೈವ ಏಕೆ ನನಗೆ ವಿರುದ್ಧ? ನನ್ನನ್ನೇಕೆ ಈ ನರಕಕ್ಕೆ ತಳ್ಳಿತು? ನಾನು ಮಾಡಿದ ಅಪರಾಧವೇನು?

ನಾನು ಡಿಗ್ರಿ ತೆಗೆದುಕೊಳ್ಳುವವರೆಗೆ ಮದುವೆ ಬೇಡ ಎಂದು ಅಣ್ಣನೊಂದಿಗೆ ಎಷ್ಟು ಬಾರಿ ಕೇಳಿಕೊಂಡೆ. ರಘು ಎಲ್ಲಕ್ಕೂ ಕಿವುಡಾದನೇಕೆ? ಕಾಲೇಜ್ ಬಿಟ್ಟು ಹಸೆಮಣೆಯ ಹೆಣ್ಣಾದುದು ವಿಧಿ ಲಿಖಿತವೇ ಇರಬೇಕು. ಆ ಸಂಕಟಪ್ರದ ಬಾಳಿಂದ ದಾಟಿಕೊಳ್ಳುವ ಕಠಿಣ ಪರಿಸ್ಥಿತಿ "ಹೂಂ" ಎನ್ನಿಸಿತು. ಬಾಣಲೆಯಿಂದ ಬೆಂಕಿಗೆ ಹಾರುತಿದ್ದೇನೆಂಬ ಕಲ್ಪನೆ ಆಗ ಖಂಡಿತ ಇರಲಿಲ್ಲ....ಈ ಜೀವನ ಎಷ್ಟು ಘೋರ ಎಂಬುದು ಅರ್ಥವಾದುದು ಅನಂತರವೇ.

ಅವಳು ಚೊಚ್ಚಲ ಗರ್ಭಿಣಿಯಾದಾಗಲೇ ನನಗೆ ಗಂಡು ಮಗು ಬೇಕು ಎಂದಿದ್ದ ಗೋಪು. ಆದರೆ, ದೈವಾಯತ್ತವಾದ ಕೊಡುಗೆಯನ್ನು ಆಗ ಉಪೇಕ್ಷಿಸಲಿಲ್ಲವಾದರೂ ಅನಂತರ ಮಡಿಲು ತುಂಬಿದ ಅವಳಿ ಹೆಣ್ಣು ಮಕ್ಕಳಿಂದ ಅವನ ಸಣ್ಣ ಮನಸ್ಸು ವಿಕಾರಗೊಂಡಿತು. ನಿರಪರಾಧಿಯಾದ ಮೋಹಿನೀ ಮರೆಯಲ್ಲಿ ಕಂಬನಿಗರೆದರೂ ಸಮಾಧಾನದ ಮುಖವಾಡ ತೊಟ್ಟು ಜೀವನಭಾಗಿಯಾದಳು. ಆದರೂ ಆತನ ವಿಕಾರ ಬುದ್ಧಿಯ ಕಾರ್ಕೋಟಕ ಎಂದಾದರೂ ಸುಮ್ಮನಿದ್ದೀತೆ? ಕುಟುಕಿ ಕುಟುಕಿ ಮೈಮನವೆಲ್ಲಾ ತೊಡೆಯಲಾಗದ ನಂಜಿನ ಬೀಡು....ನಯನದ್ವಯಗಳು ಕಂಬನಿಯ ಕಡಲು.

೨

ಕುಕ್ಕೂ, ಕುಕ್ಕೂ, ಕುಕ್ಕೂ, ಕುಕ್ಕೂ. ಕರೆ ಗಂಟೆ ಹಕ್ಕಿ ಕೂಗಿತು.

ಮುಂಬಾಗಿಲ ಬಳಿ ಬೂಟು ಕಾಲ್ಗಳ ಸಪ್ಪಳ.

"ಓ! ಅಪ್ಪ ಬಂದರು!"

ಮಕ್ಕಳು ಕೇಕೆ ಹಾಕಿದುವು. ಮೋಹಿನೀ ಕದ ತೆರೆದು ನೋಡುತ್ತಾಳೆ. ಬಂದವನು ನಿಜವಾಗಿಯೂ ಗೋಪು.

"ನಿನ್ನ ಹಾದಿ ನೋಡಿ ನೋಡಿ ನನ್ನ ಕಣ್ಣುಗಳೇ ಬತ್ತಿದುವು."

"ಸರಿ ಬಿಡು...ನೀನಿಲ್ಲಿ ಆರಾಮ. ನಮ್ಮ ಪಾಡು ದೇವರಿಗೇ ಗೊತ್ತು!"

ನಾಲ್ಕೈದು ದಿನಗಳಲ್ಲಿ ಬರುತ್ತೇನೆಂದವನು ಮುಂದಿನ ಗ್ರಾಸಕ್ಕಾಗಿ ಏನು ಮಾಡಿದೆ ಎಂದು ಕೇಳಲಿಲ್ಲವಾದುದರಿಂದ ಮಡದಿಗೆ ಹೇಳಿಕೊಳ್ಳುವ ಪ್ರಸಂಗವೂ ಬರಲಿಲ್ಲ. ಮಕ್ಕಳ ಕಣ್ಣೆಲ್ಲಾ ಅವನ ಕೈ ಕಡೆ. ಕೋಟು ತೆಗೆದಾಗ, ಪೆಟ್ಟಿಗೆ ಬಿಚ್ಚಿದಾಗ ಎವೆಯಿಕ್ಕದೆ ನೋಡಿದರೂ ತುಟಿ ಪಿಟಕ್ಕೆನ್ನಲಿಲ್ಲ. ಅವನು ಕೊಳೆ ಬಟ್ಟೆಗಳನ್ನು ಹೊರಹಾಕುತ್ತ "ನಾನು ಒಂದು ವಾರಕ್ಕೆಂದು ಒಯ್ದ ಹಣ...ಹದಿನಾರು ದಿನಗಳ ಕಾಲಹರಣ ಎಂದರೆ ಹೇಗಿರಬೇಡ. ಇಲ್ಲಿ ನಿನಗಾದರೂ ಬೇಕರಿಯಲ್ಲಿ ಕೂಲಿ ಸಿಗುತ್ತೆ. ನನ್ನದು ತ್ರಿಶಂಕು ಸ್ವರ್ಗ. ಆ

ಹಾಳಾದ ಕಳ್ಳ ಕಂಡು ಕಾಣುತ್ತ ಮಾಯಾ ಮೃಗದ ಆಟ ಆಡಿದ. ಹಿಂದೆರಡು ಬಾರಿಯೂ ಹೀಗಾಯ್ತು. ಈಗಲೂ ಹೀಗೆ. ಬಡ್ತಿ ಸಿಗುವುದಿರಲಿ, ಹಿಂಬಡ್ತಿ ಆಗದಿದ್ದರೆ ಸಾಕು. ಕೈ ಹಿಡಿದ ಮಡದಿ ಅದೃಷ್ಟವಂತಳಾದರೆ ಅದರ ರೀತಿಯೇ ಬೇರೆ. ಒಂದಲ್ಲ ಅಂತ ಮೂರು ಹೆಣ್ಣು ಹೆತ್ತ ಮಹಾ ತಾಯಿ! ಈ ದರಿದ್ರ ಮುಖಗಳನ್ನು ನೋಡುವುದೇ ಬೇಡ ಅನಿಸುತ್ತೇ!"

ಅವನು ಮನದ ನಂಜನ್ನು ಕಾರುತಿದ್ದರೆ ಕಿವಿಗಳಿಗೆ ಅರಳೆ ಇಡುವಷ್ಟು ಸಂಕಟ. ಅವನು ಪಚ ಪಚನೆ ಹತ್ತಾರು ಮಾಡುಗಳನ್ನಾಡಿದ ಮೇಲೆ ಊಟಕ್ಕೆ ಕುಳಿತ. ಮೋಹಿನಿ ಪಾಲು ಮಾತ್ರ ಉಳಿದಿತ್ತು. ಊಟಕ್ಕೆ ಸಿದ್ಧ ಪಡಿಸಿದ ಅವಳು ಬಾಗಿಲು ತೆಗೆಯುವ ಮುನ್ನ ತಟ್ಟೆಯನ್ನು ಎತ್ತಿಗೂಡಿಗಿಟ್ಟದ್ದಳು. ಅದೇ ತಟ್ಟೆಯನ್ನು ಅವನ ಮುಂದೆ ಇಟ್ಟಳು, ಒಡಲಲ್ಲಿ ಅತೀವ ಹಸಿವೆಯನ್ನು ತುಂಬಿಕೊಂಡು. ಸಕ್ಕೂ ನೋಟ ಅರ್ಥ ಪೂರ್ಣವಾಗಿ ನೋಡಿತು. ಮೋಹಿನಿ ಸಣ್ಣಗೆ ಕಣ್ಣು ಮಿಸುಕಿ ಸುಮ್ಮನಿರು ಎಂದು ಸೂಚಿಸಿ ಬೇರೆಡೆಗೆ ನೋಟ ಹರಿಸಿ ಒಳ ಸರಿದಳು.

ಗೋಪು ಅರ್ಧ ಉಂಡ ನಂತರ "ನಿನ್ನ ಊಟ ಆಗಿದೆಯಾ ಮೋಹ್ನೀ?"

ಅವಳು ಉತ್ತರಿಸುವುದರೊಳಗಾಗಿ ನೀನಾ–ಮೀನಾ ಒಂದೇ ಬಾರಿಗೆ ನುಡಿದರು "ಅಮ್ಮನ ಊಟವೇ ನಿನಗೆ ಕೊಟ್ಟಿದ್ದು."

"ಹೌದಾ ಮೋಹ್ನೀ?"

ಅವಳು ಒಳಗಿಂದಲೇ ಹೇಳಿದಳು "ನೀನುಣ್ಣು ಪರವಾಯಿಲ್ಲ."

ಗೋಪು ಮರು ಮಾತಾಡದೆ ತಟ್ಟೆ ಬಳಿದುಂಡು ತನ್ನ ಚೀಲ ತೆಗೆದು ಹಾದಿಯಲ್ಲಿ ಕೊಂಡುಕೊಂಡಿದ್ದ ಬ್ರೆಡ್ಡನ್ನು ಅವಳಿಗೆ ಕೊಟ್ಟು ತಾನು ಹಾಸಿಗೆ ಸೇರಿದ.

ಆ ರೊಟ್ಟಿಗೆ ಮೂವರು ಮಕ್ಕಳು ಪಾಲುದಾರರಾದರು.

* * *

ಗೋಪು ಮೂರು ಬಾರಿ ಕಳ್ಳನನ್ನು ಹಿಡಿಯಲು ಅಸಮರ್ಥನಾದುದ ರಿಂದ ಕೈಲಾಗದ ಹುಂಬರ ಪಟ್ಟಿಯಲ್ಲಿ ಸೇರಿಹೋಗಿತ್ತು ಹೆಸರು.

ಅವನು ವ್ಯರ್ಥ ಸಾಹಸದಿಂದ ವ್ಯಗ್ರನಾಗಿದ್ದ. ಮನೆ ಮಕ್ಕಳ ಕಿರಿಕಿರಿ ಸಹಿಸಲಾರ. ಮಡದಿಗೆ ನೆರವಾಗಲೀ, ಸಂಸಾರದ ಹೊಣೆಯಾಗಲೀ ತನಗೆ

ಸೇರದು. ಸದಾ ಸಿಡಿಮಿಡಿ, ಕಿಡಿಕಿಡಿ.

ಮೋಹಿನಿ ಈ ಕಷ್ಟದಿಂದ ಪಾರಾಗಲು ಬೇಕರಿಯ ಕೆಲಸ ಖಾಯಂ ಮಾಡಿಕೊಂಡು, ನೆರೆಮನೆಯ ಅಜ್ಜಿಗೆ ಮಕ್ಕಳನ್ನು ನೋಡಿಕೊಳ್ಳುವ ಹೊಣೆ ಹೊರಿಸಿದ್ದು ಸರಿಯೆನಿಸಲಿಲ್ಲ ಗೋಪಿಗೆ. ಮೈಯೆಲ್ಲಾ ಉರಿ.

"ನಾನು ಮನೆಗೆ ಬಂದರೆ ನೀನು ಬೇಕರಿಯಲ್ಲಿ?"

"ನಿನಗೆ ಹೊಣೆಗಾರಿಕೆ ಬೇಡ ಎಂದರೆ ನನಗೆ ಬೇಡವೆ? ಈ ಚಿಕ್ಕ ಚಿಕ್ಕ ಮಕ್ಕಳನ್ನು ಏನು ಮಾಡಲಿ? ಪುಷ್ಟಿಕರ ಆಹಾರವಿಲ್ಲದೆ ನಲುಗಿದ ರೀತಿ ಕರಳು ಕೊರೆಯುತ್ತದೆ."

"ಹೆಣ್ಣು ಕೂಸುಗಳು ಬದುಕಿದರೆ ಏನು ಫಲ? ರೆಕ್ಕೆ ಬಲಿತರೆ ಹಾರಿಹೋಗುವ ಹಕ್ಕಿಗಳು!"

"ಛೀ!ಛೀ! ಹೀನಮನೋಭಾವ!"

ಮೋಹಿನಿ ಆಕ್ಷಣವೇ ಹೊರಟು ಹೋದಳು. ಆ ಕಿಷ್ಕಿಂಧಾ ಪುರಿಯಲ್ಲಿ ಅಡಿಗೆ ಮನೆಯೊಂದೇ ಮುಖಮರೆಸಿಕೊಳ್ಳುವಂತಹ ತಾಣ. ಈಗೀಗ ಅವನ ಸಹವಾಸ ಬೇಡವೇಬೇಡ ಎನಿಸುತ್ತಿದೆ. ತನಗೊಂದು ಜೀವನಮಾರ್ಗ ಭಗವಂತ ತೋರಿಕೊಟ್ಟರೆ ಇಲ್ಲಿಂದ ಹೇಗಾದರೂ ಪಾರಾಗುತಿದ್ದೆ...ಈ ಜೀವನ ಎಲ್ಲಾ ರೀತಿಯಿಂದಲೂ ಹಿಂಸ್ರಕ. ದಯೆ–ಕರುಣೆಗಳಿಂದಲೂ ದೂರ. ಸಹಾಯ–ಸಹಕಾರಗಳಿಂದಲೂ ದೂರ. ಸತ್ ಶಾಂತಿಯಂತೂ ಮೈಲಿ ಮೈಲಿ ದೂರ. ಜೀವನಕ್ಕೆ ಕಾಲಿಡುವ ಮುನ್ನ ಉಪಾಧ್ಯಾಯಿನಿಯಾಗುವ ಇಚ್ಛೆ ತಲೆ ತುಂಬಾ ಇತ್ತು. ಸಂಕಟ–ಸಂಕಷ್ಟಗಳ ಮೈಲಿಗಲ್ಲುಗಳನ್ನು ದಾಟಿ ಬರುವಾಗ ಮನದಿಚ್ಛೆ ಉದುರಿದ ತರಗೆಲೆ.

ಒಂದಲ್ಲ, ಒಂದು ರೀತಿಯಲ್ಲಿ ಆರ್ಥಿಕ ಭದ್ರತೆಗೆ ತನ್ನ ಅಳಿಲ ಮಳಲ ಸೇವೆಯೂ ಸಲ್ಲಲಿ ಎಂಬ ಆಶಯ, ಪ್ರತಿಯೊಂದಕ್ಕೂ ಕೈಯೊಡ್ಡುವು ದೆಂದರೆ ಮಾನಸಿಕ ಹಿಂಸೆ. ಮೂವರು ಮಕ್ಕಳ ಪೋಷಣೆ ಸಮಯವನ್ನು ಸೂರೆಗೊಳ್ಳುತ್ತದೆ. ಮನಃಬುದ್ಧಿಗಳು ಅತಂತ್ರ. ಸಮಯನಿಷ್ಠೆ ಗಾವುದ ದೂರ...ದೂರ ....ದೂರ....

ಪುರಾತನ ಬುತ್ತಿಯಲ್ತೆ ಇಂದಿನ ಕರ್ಮವಿಪಾಕಂ?

೩

ಮೋಹಿನಿ ಮುಂದಿನ ಬಾಗಿಲು ಮುಚ್ಚಿ ಒಳ ಬಂದಾಗಲೇ ಕರೆ ಗಂಟೆಯ ಕರೆ.

ಕುಕ್ಕೂ, ಕುಕ್ಕೂ, ಕುಕ್ಕೂ, ಕುಕ್ಕೂ,

ಮೋಹಿನಿ ಕದ ತೆಗೆದು ನೋಡಿದರೆ ತನ್ನ ಶಾಲಾ ಗೆಳತಿ–ನೆರೆಮನೆಯ ಗೆಳತಿ ಆದ ಸುಮನಾ. ಒಮ್ಮಲೇ ಎರಡೂ ಕೈಗಳಿಂದ ಸ್ವಾಗತಿಸಿ ಅತ್ಯಂತ ಪ್ರೀತಿಯಿಂದ ಆಲಂಗಿಸಿಕೊಂಡು "ನಿನ್ನ ಮುಖ ನೋಡಿ ಎಷ್ಟು ವರ್ಷವಾಗಿತ್ತು' ನೀನೂ ತುಂಬಾ ಸೊರಗಿದ್ದಿ. ನಿನ್ನ ಮಗ ಹೇಗಿದ್ದಾನೆ"

ಪ್ರಶ್ನೆಗಳ ಮೇಲೆ ಪ್ರಶ್ನೆಗಳೆದ್ದುವು. ಉಭಯ ಕುಶಲೋಪರಿಯೂ ಆಯಿತು.

"ಈ ಮಧ್ಯೆ ಎರಡು ಬಾರಿ ಬಂದಿದ್ದೆ. ನನ್ನ ಮನಃಶಾಂತಿ ಇಲ್ಲದೆ ನಾನು ಮನೆ ಮೆಟ್ಟಲಿಳಿಯಲಿಲ್ಲ. ಈ ಸಲಿ ನಿನಗಾಗಿ ಬಂದೆ. ನನ್ನ ಸಂಸಾರದಲ್ಲಿ ಎಲ್ಲರಿಗೂ ವರದಕ್ಷಿಣೆಯ ಗೀಳು. ಅಲ್ಲಿ ಬದುಕುವುದೇ ಕಷ್ಟ. ಮದುವೆಯಲ್ಲಿ ಆದ ಒಪ್ಪಂದವೇ ಬೇರೆ. ಇಂದಿನ ಬೆಳವಣಿಗೆಯೇ ಬೇರೆ. ಮಾನಸಿಕ ಹಿಂಸೆ....ಆತ್ಮಿಕ ಹಿಂಸೆ...ಏನೆಲ್ಲಾ ಇದೆ. ಇರಲಿ. ಈಗ ನಿನ್ನ ಕತೆಯೇನು ಹೇಳು 'ಏನೇನೋ ಇಂತಹದೇ ಕಿರಿಕಿರಿ ಕೇಳಿದೆ. ಸಾಕಪ್ಪಾ, ಈ ಹೆಣ್ಣು ಜನ್ಮ....!"

"ನಾವು ಏನೇನು ಮಾಡಿದೇವೋ ಅದನ್ನು ತೀರಿಸುವುದಕ್ಕೆ ಹೆಣ್ಣಾಗಿ ಹುಟ್ಟಿದ್ದೇವೆ."

"ಬಿಡು. ನಿನಗೆ ಅಣ್ಣ ಅತ್ತಿಗೆಯರೇ ಮೃತ್ಯು. ಸಬ್ ಇನ್ಸ್‌ಪೆಕ್ಟರ್ ಎಂದು ಸುಳ್ಳು ಹೇಳಿ ಪೋಲೀಸಿನವನಿಗೆ ಮದುವೆ ಮಾಡಿದ್ದೂ ತಿಳಿಯಿತು."

"ನನ್ನ ಸುತ್ತಮುತ್ತ ನನ್ನವರಾಗಿ ಯಾರೂ ಇರಲಿಲ್ಲ. ಅವರು ಹೇಳಿದ್ದಕ್ಕೆ ಹ್ಞೂ ಎನ್ನಬೇಕಾಯಿತು. ಅದೂ ಕೂಡ ಕಾಟಾಚಾರದ ಮದುವೆ. ನಿಮ್ಮಮ್ಮನಿಗೆ ಎಲ್ಲಾ ಗೊತ್ತು. ಅವರೇ ಹೇಳುತ್ತಾರೆ ಕೇಳು...ಮಧ್ಯಾಹ್ನ ಮೂರು ಗಂಟೆಗೆ ನನ್ನನ್ನು ಇಲಿಗೆ ಕರೆತಂದರು. ಎಡಬಲಕ್ಕೆ ಕಣ್ಣಾಡಿಸಿದರೆ ಸಾಲಾಗಿ ಪೋಲೀಸ್ ಗೃಹಗಳು! ಒಮ್ಮೆ ದಂಗಾಗಿ ಹೋದೆ. ಹೃದಯ ಈಗಲೀಗ ಬರಿಯುವಂತೆ

ಡವಡವಿಸಿತು. ಬಹು ಕಷ್ಟದಿಂದ ನನ್ನ ನೋವನ್ನು ನುಂಗಿಕೊಂಡೆ. ಅದರ ಬಗ್ಗೆ ಚಕಾರ ಎತ್ತಲಿಲ್ಲ. ಆಗಲೇ ಹೊರಟು ಬಿಡೋಣ ಎಂದೂ ಯೋಚಿಸಿದೆ .....ಹೋಗುವುದಾದರೂ ಎಲ್ಲಿಗೆ? ನಮಗೆ ರಕ್ಷಣೆ ಎಲ್ಲಿದೆ? ಎಲ್ಲಾ ಕಾರಣಗಳಿಂದ ಈ ನರಕದಲ್ಲಿ ಮುಳುಗಿ ಹೋದೆ. ಮುಂದೇನು? ಎಂಬ ಪ್ರಶ್ನೆ ಹಗಲಿರುಳು ಕಾಡುತ್ತಲೇ ಇದೆ. ದೂರ.....ದೂರ ಗಮ್ಯದ ಹಾದಿ ಕಾಣಿಸುತ್ತಲೇ ಇಲ್ಲ. ರಘು ಕೇವಲ ಎರಡು ವರ್ಷ ಓದಿಸಿದ್ದರೆ ನನ್ನ ಜೀವನ ನಾನು ನೋಡಿಕೊಳ್ಳುತ್ತಿದ್ದೆ. ಅವನ ಐದು ಮಕ್ಕಳನ್ನು ಮಮತೆಯಿಂದ ನೋಡಿಕೊಂಡಿರುವೆ. ಅದಕ್ಕೆ ಅವನು ಮಾಡಿದ ಉಪಕಾರ ಇದೇ."

ಮಾತುಗಳು ಗದ್ಗದಿತವಾಗಿ ಕಣ್ಣುಗಳಲ್ಲಿ ಕಂಬನಿಗಳು ತುಂಬಿದುವು.

ಸುಮನಾ ಗೆಳತಿಯನ್ನು ಸಂತೈಸಿ ನುಡಿದಳು "ಈಚೆಗಷ್ಟೇ ಕಮಲ ಗಂಡ ತೀರಿಕೊಂಡನಂತೆ! ನಿನಗದು ತಿಳಿಯಿತೇ?"

"ಅಯ್ಯೊ, ದೇವರೆ!"

"ಆಗಲೇ ನಾಲ್ಕೆದು ತಿಂಗಳಾಯ್ತು....ನಾನು ಕಾಗದ ಬರೆದಿದ್ದೆ. ಮಿಲಿಟರಿಯಿಂದ ಬರಬೇಕಾದ ಪರಿಹಾರ ಬಂದಮೇಲೆ ಇಲ್ಲಿಗೆ ಬಂದು ಮನೆಕಟ್ಟಿ, ಬೇರೆ ಇರುತ್ತಾಳಂತೆ. ಅವಳಿಗೆ ಇಲ್ಲಿ ಸ್ಥಳ ಇದೆ. ಒಬ್ಬೊಬ್ಬರಿಗೆ ಒಂದೊಂದು ಕಷ್ಟ ಏನು ಮಾಡೋಣ? ಕಾಲೋಚಿತವಾಗಿ ನಡೆದುಕೊಳ್ಳುವುದರಲ್ಲೇ ನಮ್ಮ ಉದ್ಧಾರ...ನೀನು ಮಕ್ಕಳ ಹೊಣೆಗಾರಿಕೆ ಹೊತ್ತುಕೊ. ಉಳಿದದ್ದು ಹೇಗಾದರೂ ಇರಲಿ."

"ನಾನು ಯೋಚಿಸುವುದೂ ಅದೇ."

ಅನಂತರ ಅಂದಿಂದಿನ ಆತ್ಮೀಯ ವಿಚಾರಗಳೆಲ್ಲಾ ಕರಗಿದುವು. ಇಬ್ಬರೂ ತಮ್ಮನ್ನು ತಾವೇ ನಿಗ್ರಹಿಸಿಕೊಂಡು ಉಸಿರಾಡಿದರು. ಮೋಹಿನಿ ಗೆಳತಿಗೆ ಆತ್ಮೀಯ ಆತಿಥ್ಯ ನಡೆಸಿ ಬೀಳ್ಕೊಟ್ಟಳು.

ಮೇಜಿನ ಮೇಲಿದ್ದೊಂದು ಮಾಸಿಕವನ್ನು ಕೈಕೊಂಡಳು ಮೋಹಿನಿ. ಅದರ ನಾರಿಲೋಕ ವಿಭಾಗದಲ್ಲಿ ಪ್ರಕಟವಾದ ಲೇಖನದ ಮೇಲೆ ಕಣ್ಣಾಡಿಸಿದಳು....ಹಿಂದಾಸ್ಥಾನದಲ್ಲಿ ಸ್ತ್ರೀ ಜೀವನಕ್ಕೆ ಬೆಲೆಯೇ ಇಲ್ಲ ....ಎಷ್ಟೇ ಮೇಧಾವಿಯಾಗಿರಲಿ, ಎಷ್ಟೇ ಶಕ್ತಳಾಗಿರಲಿ ಬದುಕು ನಾಲ್ಕು ಗೋಡೆಗಳ ಮಧ್ಯೆ. ನೂರಕ್ಕೋ ಸಾವಿರಕ್ಕೋ ಒಬ್ಬಿಬ್ಬರು ಪುಣ್ಯಾತ್ಮರಿರುತ್ತಾರೆ. ಅವರ

ನೇರಕ್ಕೇ ಎಲ್ಲರನ್ನೂ ನೋಡುವುದಾದರೆ ಅದು ಖಂಡಿತ ತಪ್ಪು. ವೈಯಕ್ತಿಕ-ಆರ್ಥಿಕ ಸ್ವಾತಂತ್ರ್ಯ ಕೈಗೂಡದೆ ಜೀವನಕ್ಕೆ ಮಾನ್ಯತೆಯೂ ಇಲ್ಲ; ಶೋಭೆಯೂ ಇಲ್ಲ. ಕೃತಕೃತ್ಯತೆಯೂ ಇಲ್ಲ. ಸಾವಿಗೆ ಸಂಕಟವೂ ಇಲ್ಲ......

ಲೇಖನವನ್ನು ಓದಿದನಂತರ ನಾಲ್ಕು ಗೋಡೆಯೊಳಗಿನ ಬದುಕನ್ನು ಮೆಲುಕು ಹಾಕಿತು ಮನಸ್ಸು...ಈ ಸ್ತ್ರೀ ಜೀವನ ಎಷ್ಟೊಂದು ನಿಕೃಷ್ಟ?

"ಜೀವನ ಸಾರ್ಥ್ಯಕ್ಯಕ್ಕೆ ನಾವೇ ಹೊಣೆ...ದಾರಿ ಕಂಡಲ್ಲಿ ಮುನ್ನುಗ್ಗದಿದ್ದರೆ ತಪ್ಪು ನಮ್ಮದೇ. ಬದುಕು-ಸಾಧನೆ ಒಂದನ್ನುಳಿದು ಒಂದಿಲ್ಲ ಎರಡೂ ಒಂದೇ ನಾಣ್ಯದ ಎರಡು ಮುಖಗಳು ಅಂದಮೇಲೆ ತಪ್ಪು ಯಾರದು? ಪ್ರಶ್ನೆ ಪ್ರಶ್ನೆಯಾಗಿಯೇ ಉಳಿದಾಗ ಅಲ್ಲೋಲಕಲ್ಲೋಲವಾಯಿತು ಮನಸ್ಸು. ಆದರೂ, ಆಸೆಯ ಸುಳಿಯೊಂದು ತಲೆಯಲ್ಲಿ ಸುತ್ತುತ್ತಿರುತ್ತದೆ ತನಗರಿಯದಂತೆ.

ಮೋಹಿನಿ ಬೇಕರಿಯ ಕೆಲಸ ವಹಿಸಿಕೊಂಡದ್ದು ಸಹಿಸಲಿಲ್ಲ ಗೋಪು. ಆದರೂ ಜೀವನ ನಿರ್ವಹಣೆಗಾಗಿ ಎಂಬ ಯೋಚನೆಯೂ ಬರುತ್ತದೆ. ಒಮ್ಮೆ ಸಿಡುಕು ಇನ್ನೊಮ್ಮೆ ಸಮಾಧಾನ. ಹೇಗೋ ದಿನಗಳೆಯುತಿತ್ತು ಕಾಲಮಾನ.

ಬೇಕರಿಯ ಕೆಲಸ ಕಠಿಣ. ಪಗಾರ ಕಡಿಮೆಯಾದರೂ ಉಳಿಕೆಪಳಿಕೆ ದಕ್ಕುತಿದ್ದುದರಿಂದ ಸಣ್ಣ ಸಮಾಧಾನ. ಅಜ್ಜಿ ಮನೆಯಲ್ಲಿ ನೆಲಸಿದ ನಂತರ ಸಕ್ಕೂ ಶಾಲಾ ಜೀವನ ಸರಾಗ. ಮಧ್ಯಾಹ್ನ ಮನೆಗೆ ಮರಳಿದಾಗ ನೀನಾ-ಮೀನಾ ಜಿಗಣೆ ಅಂಟಿದಂತೆ ಅಂಟಿಕೊಳ್ಳುತ್ತಾರೆ. ಅವರ ಕ್ಷೇಮಕ್ಕಾಗಿಯೇ ತನ್ನ ಸಾಧನೆ. ಮಕ್ಕಳ ಜೀವನ ಸರಿಹೋದರೆ ತನ್ನ ಬದುಕು ಸಾರ್ಥಕ.

ಆದರೆ...

ಕಾಲೇಜಿನ ಮೆಟ್ಟಲು ಹತ್ತಿ ನಾನು ಮಾಡುತ್ತಿರುವುದೇನು?

ಪರಿಸ್ಥಿತಿಗೆ ತಲೆಬಾಗಿರುವೆ ಎಂಬ ಸಮಾಧಾನ.

ಪ್ರಶ್ನೋತ್ತರಗಳನ್ನು ಮೌನಗತಿಯಲ್ಲಿ ಅವಲೋಕಿಸುತ್ತ ನಿಟ್ಟುಸಿರು ಬಿಡುತ್ತಾಳೆ ಮೋಹಿನಿ.

ಗೋಪು ಮೂರು ದಿನ ರಜೆ ಹಾಕಿದ್ದ.

ಮನೆಯಲ್ಲಿ ಮಡದಿಯಿಲ್ಲ. ಸಕ್ಕೂ ಶಾಲೆಯಲ್ಲಿ. ಆ ಅಜ್ಜಿಯ ಮುಖ ನೋಡಿದರೇನೇ ಕಸಿವಿಸಿ. ಹೊರಗಡೆ ಅಡ್ಡಾಡಿ ಬರಲು ಹೋದವನು

ಹಿಂದಿರುಗಿ ಬರುತ್ತ ಬ್ಯಾಂಕಿಗೆ ಹಣ ಕಟ್ಟಲು ಹೋದ. ಮುನ್ನೂರು ರೂಗಳನ್ನು ಕಟ್ಟುವಾಗ ಪಕ್ಕದಲ್ಲಿದವ ಐದು ಸಾವಿರ ರೂಪಾಯಿಗಳನ್ನು ಬ್ಯಾಂಕಿನಲ್ಲಿ ತೆಗೆದುಕೊಂಡುದುದನ್ನು ಕಂಡ. ಅವನು ಹಣವನ್ನು ಎಣಿಸಿ ಕೊಳ್ಳುತಿದ್ದುದನ್ನು ಗೋಪು ಅಡಿಗಣ್ಣಿಂದಲೇ ನೋಡುತಿದ್ದ. ಅವನು ಡೆಸ್ಕಿನ ಮೇಲೆ ಹಣದ ಕಟ್ಟನ್ನಿಟ್ಟುಕೊಂಡು ಲೆದರ್ ಬಾಗಿನ ಜಿಪ್ ತೆಗೆಯುವಷ್ಟರಲ್ಲಿ ಗೋಪು ಹಣವನ್ನು ಸೂಕ್ಷ್ಮವಾಗಿ ಹಾರಿಸಿ ತನ್ನ ಚೀಲಕ್ಕೆ ಸೇರಿಸಿದ. ಜನಸಂದಣಿ ಹೆಚ್ಚಾಗಿದ್ದುದರಿಂದ ಗುಮಾನಿ ಯಾರ ಯಾರ ಮೇಲೋ ಹರಿದಾಗ ಇವನು ಏನೂ ಅರಿಯದವನಂತೆ ಹೊರಬಿದ್ದು ತಪ್ಪಿಸಿಕೊಂಡ.

ಐದು ಸಾವಿರ ರೂಪಾಯಿ ತನ್ನ ದುಶ್ಚಟಗಳಿಗೆ ನೆರವು ನೀಡಿತು. ಪಾನಗೋಷ್ಠಿಗಳಲ್ಲಿ ಸ್ತ್ರೀಗೋಷ್ಠಿಗಳಲ್ಲಿ ಮುಳುಗೆದ್ದು ಓಲಾಡಿದ. ರಾತ್ರಿ ಮನೆ ಮುಟ್ಟಿದಾಗ ಮೈಮೇಲೆ ಪ್ರಜ್ಞೆಯೇ ಇರುತ್ತಿರಲಿಲ್ಲ. ಆತನ ಸ್ಥಿತಿಗತಿ ತುಂಬಾ ಆತಂಕ ಮೂಡಿಸಿತು ಮೋಹಿನಿಗೆ. ಹಾಸಿಗೆಯ ಸುರುಳಿಯನ್ನು ಬಿಚ್ಚಿ ಹಾಸಿಕೊಟ್ಟು "ಮಲಗಿಕೋ ಗೋಪು. ಹೀಗಾದರೆ ಹೇಗೆ? ನಿನ್ನದು ವಿಪರೀತಾಯಿತು" ಎಂದಳು ನುಡಿಯಲಾರದೇ ನುಡಿಯುವಂತೆ.

ಅವಳ ಹಿತವಾದವನ್ನು ಮನಸ್ಸಿಗೆ ಹಾಕಿಕೊಳ್ಳದೆ ಅರೆ ಪ್ರಜ್ಞೆಯಲ್ಲಿ ಬಡ ಬಡಿಸಿದ "ನಾನು.....ಮೂರು ಬಾರಿ ಕಳ್ಳನನ್ನು ಹಿಡಿಯಲಾಗದೇ.... ಸೋತರೇನು? ಹಹ್ಹಹ್ಹಾ!...ಈಗ, ಈಗ ಸುಲಭದಲ್ಲಿ ವಿಜಯಿಯಾದೆ. ಹೊಟ್ಟೆತುಂಬಾ ಉಂಡಿರುವೆ...ಮಿಲಿಟೆರಿ ಹೋಟಲ್ ಊಟ, ಮಜ ಅಂದರೆ.....ಹೀಗಿರಬೇಕು. ಆ ಬೆಪ್ಪು ತಕ್ಕಡಿ ಸಾವುಕಾರ ಅಲ್ಲಲ್ಲೇ..... ಹುಡುಕುತಿದ್ದ. ನಾನು ಎಷ್ಟು ಸೂಕ್ಷ್ಮವಾಗಿ ಹಣ ಹಾರಿಸಿದೆ ಗೊತ್ತಾ? ಬಹುಶಃ ಪೋಲೀಸ್ ಉಡುಪು....ನನ್ನ ಕಾಪಾಡಿತು...ಮೋಹ್ನೀ! ನೀನು ರಜ ದಿನಗಳಲ್ಲಿ ಏಕೆ ಪೋಲೀಸ್ ಉಡುಪು....ಧರಿಸುತ್ತಿ ಎಂದು ಕೇಳಿದ್ದೆ..... ಹೆಹ್ಹೆಹ್ಹೇ!..!

ಗೋಪಿ ಕೆಮ್ಮತೊಡಗಿದ. ಕೂಡಲೇ ವಾಂತಿಯಾಯಿತು. ಹಾಸಿಗೆ ಬಟ್ಟೆಯೆಲ್ಲಾ ವಮನರಾಶಿ. ಮದ್ಯದ ದುರ್ಗಂಧ. ಒಂದೆರಡು ಕ್ಷಣ ತಲೆ ತಿರುಗಿದಂತಾಯಿತು ಮೋಹಿನಿಗೆ. ಆದರೂ, ಸ್ವಚ್ಛಗೊಳಿಸದೆ ವಿಧಿಯಿಲ್ಲ. ದುಪ್ಪಟಿಯನ್ನು ತೆಗೆಯುತ್ತಿರುವಾಗ ಬಚ್ಚಲಿಗೆ ಹೋದ ಅವನು ಮತ್ತೊಮ್ಮೆ

ವಾಂತಿ ಮಾಡಿ ಮುಖಮಜ್ಜನ ಮಾಡಿದ. ನೆತ್ತಿಗೆ ಏರಿದ್ದ ನಿಶೆ ಇಳಿಯಿತು. ಮನಸ್ಸು ತಿಳಿಯಾದರೂ ಶರೀರ ದುರ್ಬಲ. ಕಾಲು ಚಾಚಿ ಬೆಂಚಿನ ಮೇಲೆ ಕುಳಿತುಕೊಂಡು ದಿನಚರಿಯ ಹೀನ ಚರಿತ್ರೆಯ ಮೇಲೆ ಮನವನ್ನು ಹರಿಯಬಿಟ್ಟ. ಅಂದಿಂದಿಗೂ ಇದು ಅಭ್ಯಾಸವಾದರೂ ಇಂದಿನ ಚರಿತ್ರೆ ಅಸಹ್ಯ ಎನಿಸದಿರಲಿಲ್ಲ. ಮರುಗಳಿಗೆಯಲ್ಲೇ ತೀರ ಮುಳುಗಿದವನಿಗೆ ಚಳಿಯೇನು ಗಾಳಿಯೇನು? ಎಂಬ ಧೋರಣೆ....

* * *

ಮೋಹಿನಿಗೆ ಈಚೀಚೆಗೆ ಜೀವನವೇ ಭಾರ...ಬದುಕೇ ಭಾರ.

ಆದರೆ....?

ಜೀವನವನ್ನು ಕೊನೆಗಾಣಿಸುವುದು ಕಷ್ಟವೇನಲ್ಲ. ಮೂರು ಜನ ಹೆಣ್ಣು ಮಕ್ಕಳು? ಮುಗ್ಧಮನದ ಮಕ್ಕಳನ್ನು ನೆನೆದರೆ ತನುಮನ ಕಲ್ಲಿಗಿಂತ ಕಲ್ಲು. ಏನು ಮಾಡಲಿ? ಹೇಗೆ ಈ ಜೀವನೋದ್ಧಾರ? ಯಾವ ಕ್ರಮ ಕೈ ಕೊಳ್ಳಲಿ? ಎಂಬ ಪ್ರಶ್ನೆ. ಹೀನ ಚರಿತ್ರೆಯ ಗಂಡಿನಾಶ್ರಯವಿಲ್ಲದೆ ಬಾಳಲಾರೆನೇ ಎಂಬ ಚಿಂತೆ. ಒಮ್ಮೆಂದೊಮ್ಮೆಗೇ ಎದೆಯ ಕೆಚ್ಚು ನರನಾಡಿಗಳಲ್ಲಿ ಬಿಸಿ ನೆತ್ತರನ್ನು ಹರಿದಾಡಿಸುವುದಾದರೂ ಮರುಗಳಿಗೆಯಲ್ಲೇ ಪುರಾತನವಾಗಿ ತಣ್ಣಗೆ – ಬರೀ ತಣ್ಣಗೆ. ಹಾ ! ಕುಸುಮ ಕೋಮಲ 'ತನ್ನತನ'ಕ್ಕೆ ಕಾಯಕಲ್ಪ ಹೇಗೆ? ಏನು ಮಾಡಲಿ??

ಕುಕ್ಕೂ, ಕುಕ್ಕೂ, ಕುಕ್ಕೂ, ಕುಕ್ಕೂ

"ಮೋಹ್ನೀ....ಮೋಹ್ನೀ!"

ಗೋಪು ಸ್ವರ. ಮೋಹಿನಿ ಕದ ತೆರೆದಳು. ಅವನು ಬಟ್ಟೆಗಳಚಿ ಕುರ್ಚಿಯ ಮೇಲೆ ತಗಲಿಸಿ, ಬೂಟುಗಳನ್ನು ಕುರ್ಚಿಯಡಿ ತಳ್ಳಿ ಮುಖ ಮಜ್ಜನ ಮಾಡಿ ಹೇಳಿದ "ಮೋಹ್ನೀ! ಇಂದು ಮಂಗಳೂರಿಗೆ ಹೊರಟಿರುವೆ. ಭಾರೀ ಕಳ್ಳಸಾಗಾಣಿಕೆದಾರನನ್ನು ಬೆನ್ನಟ್ಟಿ ಇಬ್ಬರು ಪೋಲೀಸರು ಹೋಗುತ್ತೇವೆ. ನಮ್ಮೊಟ್ಟಗೆ ಇನ್ಸ್‌ಪೆಕ್ಟರೂ ಇರುತ್ತಾರೆ, ಬರುವುದು ನಾಲ್ಕು ದಿನ, ಭಾನುವಾರವಂತೂ ಬರುತ್ತೇವೆ."

ಮೋಹಿನಿ ಊಟ ಬಡಿಸಿದ ನಂತರ ಮೂರು ಜೋಡಿ ಬಟ್ಟೆಯನ್ನೂ ಜೋಡಿಸಿ ಚೀಲಕ್ಕೆ ತುಂಬಿ ಪಯಣಕ್ಕೆ ಸಜ್ಜುಗೊಳಿಸಿದಳು.

"ಮೋಹ್ನೀ! ಈಗ ಜೇಬಿನಲ್ಲಿ ದುಡ್ಡಿಲ್ಲ. ಬ್ಯಾಂಕಿಂದ ತರುವಷ್ಟು ಸಮಯವಿಲ್ಲ."

"ಆಗಲಿ" ಹೇಳಲಾರದೇ ಹೇಳಿದಳು ಅವಳು

ಈ ಸಲಿಯೂ ತಾನು ಜಯಶೀಲನಾಗದಿದ್ದರೆ ಮುಂದೆ ಇಂತಹ ಸದವಕಾಶಗಳು ಇಲ್ಲವೇ ಇಲ್ಲವೆಂಬುದು ಶತಸ್ಸಿದ್ಧ. ಅವನು ಒಂದೇ ಉಸಿರಿಗೆ ಉಂಡು ಹೊರಟ.

ಮೋಹಿನಿ ತನ್ನ ಸಂಪಾದನೆಯಲ್ಲಿ ಅಜ್ಜಿಗೆ ಐವತ್ತು ಕೊಡುತಿದ್ದುದರಿಂದ ಉಳಿಯುತಿದ್ದುದು ನೂರು ಮಾತ್ರ. ತಿಂಗಳ ಕೊನೆಯಾದುದರಿಂದ ಅದು ಎಂದೋ ಕರಗಿ ಹೋಗಿದೆ. ಮುಗಿದ ಸಾಮಗ್ರಿಗಳು, ಹಸಿದ ಮಕ್ಕಳು ಬಾಹ್ಯ ಚಿತ್ರವಾದರೆ ಮಾನಸಿಕ ಹಿಂಸೆ, ದೈಹಿಕ ಶ್ರಮ ಅಂತರಂಗಕ್ಕೆ ಕಿಚ್ಚು ಹಚ್ಚುವ ಚರಿತ್ರೆ. ಮೋಹಿನಿ ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ಕುಳಿತಿದ್ದು ತನ್ನ ನೋವನ್ನು ತಾನೇ ನುಂಗಿಕೊಂಡಳೇನೋ...ಅಜ್ಜಿ ಇತ್ತ ನೋಟಹರಿಸಿ "ಏನಾಯ್ತು ಮೋಹ್ನೀ? ಗಂಡ ಹೋದ ಅಂತ ದುಃಖಿಸ್ತೀಯೇನು?" ಎಂದಳು.

"ಇಲ್ಲಮ್ಮಾ! ಇದೇನು ಹೊಸದೇ? ಆಗಲೇ ಹತ್ತು ವರ್ಷ ಕಳೆಯಿತು. ಇದೆಲ್ಲಾ ಆಗಿನಿಂದಲೂ ಅಭ್ಯಾಸ."

ಅವಳು ಬಚ್ಚು ಬಾಯಿ ತೆರೆದು ನಗುತ್ತ "ನೀನು ಎಷ್ಟೇ ಹೇಳಿದರೂ ಅಂತರಂಗದ ಗೀಳು ನನಗೊತ್ತಿಲ್ಲವೇ ಮಗಳೇ! ಅವನು ಕುಡಿಯಲಿ, ಹೇಸು ಕೆಲಸ ಮಾಡಲಿ 'ಗಂಡ' ಎಂಬ ವಸ್ತು ವಿಶೇಷವೇ. ನಾನೂ ಇದನ್ನೆಲ್ಲಾ ಅನುಭವಿಸಿಯೇ ಕಹಿ–ಸಿಹಿ ಉಂಡವಳು. ಹೆಣ್ಣು ಎಂದೆಂದೂ ಹೆಣ್ಣೇ! ಗಂಡು ಎಂದೆಂದೂ ಗಂಡೇ!"

"ಅಂದರೆ ಈ ಜನ್ಮಕ್ಕೆ ವಿಮೋಚನೆ ಇಲ್ಲ ಎನ್ನುವಿರಾ?"

"ಸತ್ತಾಗ ಮಾತ್ರ ವಿಮೋಚನೆ!"

"ಅದು ಅಂದಿಗಾಯ್ತು. ಇಂದಿನದು ಬದಲಾದ ಕಾಲ."

"ಕಾಲಕ್ಕೂ ಮನುಷ್ಯರಿಗೂ ಸಂಬಂಧ ಕಲ್ಪಿಸುವುದುಂಟೇ? ಕಾಲವೆಲ್ಲಿ? ನಾವೆಲ್ಲಿ?

"ಅದು ಸರಿ ಅಮ್ಮಾ! ಜೀವನ ಗತಿಯನ್ನು ಅರಿತವರು ಕಾಲವನ್ನು ಬೆನ್ನಟ್ಟಬೇಕು ಅಷ್ಟೆ."

"ಅದು ಸರಿ. ನಮ್ಮ ಕೈಲೇನಾದೀತು"

ಸೋಲು ಗೆಲವು ಯಾರಿಗೂ ತಪ್ಪಿದ್ದಲ್ಲ. ಇದನ್ನೆಲ್ಲಾ ಮನಸ್ಸಿನಲ್ಲಿಟ್ಟು ಕೊಳ್ಳಬೇಡ. ಯಾರ ಜೀವನ ಸುಖವಾಗಿರುತ್ತೆ ಹೇಳು? ಹೆಣ್ಣಾಗಿ ಹುಟ್ಟುವುದೇ ಜೀವನ ದುರಂತಕ್ಕಾಗಿ. ಎಲ್ಲೋ ಕೆಲವರು ಪುಣ್ಯವಂತರಿರುತ್ತಾರೆ ಬಿಡು. ಅವರಿಗೂ ನಮಗೂ ಹೋಲಿಸುವುದಕ್ಕಿಂತ ನಮಗಿಂತಲೂ ದೀನ ದುಃಖಿಗಳತ್ತ ಗಮನ ಹರಿಸಿದರೆ ನಾವು ಸುಖಿಗಳು!"

"ಸ್ವಂತ ಅನುಭವ...."

"ಹೌದು ಮಗಳೇ, ಎಪ್ಪತ್ತು ವರ್ಷಗಳ ಬದುಕು ಇಷ್ಟು ತಿಳಿಸಿ ಕೊಡಲಾರದೇ?"

ಮೋಹಿನಿ ಮರು ನುಡಿಯದೇ ಯೋಚಿಸಿದಳು...ಹಾಗಾದರೆ ತನ್ನ ಭಾವನೆ ಬರಡೇ? ಮುಂದೆ ಹೆಜ್ಜೆಯಿಡಲೇ? ಹಿಂದೆ ಹೆಜ್ಜೆಯಿಡಲೇ? ಯಾರು ನನಗೆ ಮಾರ್ಗದರ್ಶಕರು? ಅಥವಾ ಹೀಗೆಯೇ ಬರಡು ಬಾಳು ಮುಗಿಸುವುದೇ? ..... ಆ ಪ್ರಶ್ನೆ ಎದ್ದಾಗಲೇ ಗೋಡೆಯ ಮೇಲಿನ ಹಲ್ಲಿ ನುಡಿಯಿತು. ಚಕ. ಚಕ. ಚಕ. ಚಕ.

ಮೋಹನಿ ಎಂದೂ ಶಕುನ ನಂಬಿದವಳಲ್ಲ. ಯಾರಾದರೂ ಆ ಶಕುನ ಹೇಳಿಕೊಂಡು ಕಳವಳ ಪಡುತಿದ್ದರೆ ಇವಳಿಗೆ ನಕ್ಕು ಹಾಸ್ಯ ಮಾಡುವ ಮೋಜು. ಈಗಲೂ ನಂಬದಿದ್ದರೂ ದಿಕ್ಕೆಟ್ಟ ಮನಸ್ಸು ನಾನಾಗ ಯೋಚಿಸಿದ್ದೇನು? ಎಂದು ಯೋಚಿಸುವವರೆಗೂ ಹೋಗುತ್ತದೆ.

"ಮೋಹ್ನೀ! ನಾನು ನಿಶ್ಚಿಂತೆ. ಓದಲಿಲ್ಲ, ಕಲಿಯಲಿಲ್ಲ. ಭಗವಂತ ನಮಗೆ ಏನು ಪ್ರಸಾದಿಸುತ್ತಾನೋ ಅದನ್ನು ಮನತುಂಬ ಸ್ವೀಕರಿಸಬೇಕೇ ಹೊರತು ಅದನ್ನು ಕಿಂಚಿತ್ತಾದರೂ ನಾವು ಮಾರ್ಪಡಿಸಬಲ್ಲೆವೇ? ಅಥವಾ ಸಾಧ್ಯವೇ? ಜನ್ಮಜನ್ಮಾಂತರಗಳ ಕರ್ಮ ಬೆಂಬಿಡಿದಿರುವಾಗ ಮಾಡುವುದೇನು? ಮಕ್ಕಳು, ಮರಿ, ಸಂಸಾರ ಇವೆಲ್ಲಾ ವಿಧಿಯ ಆಟಿಕೆಗಳು. ಈ ಸುಖ-ದುಃಖವನ್ನೆಲ್ಲಾ ಅವನ ಪಾದಕ್ಕೆ ಒತ್ತಿದರೆ ನಮಗೆ ನೋವಿಲ್ಲ ಬಿಡು" ಎಂದಳು ಅಜ್ಜಿ.

"ಹಾಗೆನ್ನುವುದು ಸುಲಭ. ನಮಗೆ ಮನಃಬುದ್ಧಿಗಳಿಲ್ಲದಿದ್ದರೆ ನೋವಿರು ತ್ತಿರಲಿಲ್ಲ. ಅದು-ಇದು ಎರಡನ್ನೂ ಕೊಟ್ಟು ಆಟ ಆಡಿಸುತ್ತದೆ ವಿಧಿ."

"ನಿಜ...ಈ ಪ್ರಪಂಚ ಇಷ್ಟೆ."

ಮೋಹಿನಿ ಅವನು ಬಿಚ್ಚಿದ ಬಟ್ಟೆಗಳನ್ನು ತೆಗೆದುಕೊಳ್ಳುತಿದ್ದಂತೆಯೇ ಒಳ ಬಂದ ಸಕ್ಕೂ

"ಅಮ್ಮಾ! ಹೊರಗಡೆ ರಣ ಬಿಸಿಲು ತಡೆಯುವುದೇ ಕಷ್ಟ" ಎಂದಳು. ಮುಖದ ಮೇಲಿನ ಬೆವರನ್ನು ಒರಿಸಿಕೊಳ್ಳುತ್ತ.

"ಹೌದು ಮಗಳೇ! ಹೊರ ಹೊರಟರೆ ತಲೆ ತಿರುಗು!"

"ಅಜ್ಜಿ ! ತಲೆ ತಿರುಗಿದರೆ ಮೂರು ಸುತ್ತೂ ಕಾಣಸುತ್ತೆ ಬಿಡಿ."

ಹುಡುಗಿಯ ಹಾಸ್ಯಕ್ಕೆ ಇಬ್ಬರೂ ನಕ್ಕರು.

ದೂರದಲ್ಲೆಲ್ಲೋ ಕಾಮಳ್ಳಿ – ಕಾಜಾಣಗಳ ಕೂಜನ ಕೇಳಿಬರುತ್ತಿದೆ ಸ್ವರಾನುಸ್ವರಗಳಿಂದ.

ಮೋಹಿನಿಯ ಮನದಲ್ಲಿ ವಸಂತ ಮೂಡಿನಿಂತ. ಭಾವಜೀವಿಯಾದ ಅವನು ಕೋಗಿಲೆಯ ಕೂಜನವನ್ನು ಎಷ್ಟು ಆನಂದದಿಂದ ಮನಸ್ಸಿಗೆ ತೆಗೆದುಕೊಳ್ಳುತಿದ್ದ...? ನನ್ನ ಬಾಳಿನಲ್ಲಿ ಅವನೊಂದು ಮರೀಚಿಕೆ...

೪

ಮೋಹಿನಿಯ ಅಣ್ಣ ತನ್ನ ಮನೆಯನ್ನು ಅಲ್ಲಲ್ಲಿ ಕೆಡವಿ ಹೊಸರೂಪ ಕೊಡುವ ಸಲುವಾಗಿ ಕೆಲಸ ಹಿಡಿಸಿದ್ದ. ಹಳೆಯ ಮನೆಗೆ ಹಾಗೊಂದು ಹೊಸರೂಪ ಕೊಡುವುದು ಮಡದಿಗೆ ಎಲ್ಲಿಲ್ಲದ ಉತ್ಸಾಹ.

ಅರ್ಧಶತಮಾನ ಕಳೆದಿದ್ದ ಅದು ಗಟ್ಟಿಯಾಗಿದ್ದರೂ ರೂಪ ಹಳೆಯದು.

"ಸರಸೀ, ಸರಸೀ!"

ಪತಿಯ ಕರೆಯನ್ನು ಕೇಳಿ ಹೊರ ಬಂದ ಸರಸೀ "ಈಗಲೇ ಹೊರಟಿರಾ?" ಎಂದಳು.

"ಇಂದು ಬರುವುದು ಸ್ವಲ್ಪ ಹೊತ್ತಾದೀತು. ಹಾಗೇ ಆಫೀಸಿಗೆ ಹೋಗಬೇಕಾಗಿದೆ.

"ನೋಡಿ, ಹೇಗೂ ಕೆಲಸ ಹಿಡಿಸಿದ್ದಾಯ್ತು. ಹೆಚ್ಚು ಖರ್ಚಾದರೂ ಚಿಂತೆಯಿಲ್ಲ. ಮುಂದಿನ ವರಾಂಡ ವಿಸ್ತರಿಸಲೇಬೇಕು. ನೀವು ಬರುವುದ ರೊಳಗಾಗಿ ಮುಂದಿನ ಗೋಡೆ ಒಡೆಸುವೆ."

"ಇನ್ನೊಮ್ಮೆ ಮಾಡಿಸಿದರಾಗದೇ?"

"ಪದೇ ಪದೇ ಮಾಡಿಸುವುದಕ್ಕಿಂತ ಒಮ್ಮೆ ಮುಗಿಸಿ ಬಿಡುವುದು ಲೇಸಲ್ಲವೇ?"

"ಆಗಲಿ, ಒಡೆಸು."

ಆ ಮಾತಿಗೆ ಸಂತುಷ್ಟಳಾದಳು ಸರಸಿ. ಮುಂದಿನ ಜಗಲಿಯ ಗೋಡೆಗಳನ್ನು ಒಡೆಸಿ ಮುಂದುವರಿಸಿ ಕಟ್ಟಲು ಪಾಯ ತೋಡಿದ್ದಾಯ್ತು. ಹಳೆ ಹಳೆಯ ಸಣ್ಣ ಸಣ್ಣ ಕಿಟಕಿಗಳನ್ನು ಕಿತ್ತು ದೊಡ್ಡ ಕಿಟಕಿಗಳನ್ನು ಇಡಿಸಿದ್ದಾಗಿತ್ತು. ಒಳಗಣ ಅಡ್ಡಗೋಡೆಗಳನ್ನು ತೆಗೆದು ಕೊಠಡಿಗಳನ್ನು ವಿಸ್ತರಿಸಿ, ಹಿಂಭಾಗದ ತಾವಿನಲ್ಲಿ ಹೊಸದಾಗಿ ಎರಡು ಕೊಠಡಿಗಳನ್ನು ಕಟ್ಟಿದುದರಿಂದ ತೀರಾ ಹೊಸ ಮನೆಯೇ ಆಯ್ತು ಹಳೆಯ ಮನೆ.

ಆರೇಳು ತಿಂಗಳಿಂದ ಧೂಳೀಧೂಸರಿತವಾದ ಮನೆ ಮೈಕೊಡವಿ ಮಡಿಯುಟ್ಟಿತು. ನೆಂಟರು ಇಷ್ಟರು ಬಂದುಬಂದು ನೋಡಿಕೊಂಡು ಹೋಗುತಿದ್ದರು. ನಾಲ್ಕು ಮಂದಿಯ ಕಣ್ಣಾಸರೆಯಾದೀತೆಂಬ ಕಳವಳ ಮಡದಿಗೆ.

"ರೀ! ಬಂದವರೆಲ್ಲಾ ನಮ್ಮ ಮನೆಯನ್ನು ನೋಡಿ 'ಭಲೇ!' ಎನ್ನುತಿದ್ದಾರೆ. ಯಾರದಾರೂ ಕಣ್ಣುತಾಗಿದರೆ ಕಷ್ಟ. ರೋಗ ಭಾದೆಗಳು ಅಂಟಿಯಾವು. ನಾವು ಸತ್ಯನಾರಾಯಣ ವ್ರತ ಮಾಡಿಸಿ ಊಟ ಹಾಕಿದರೆ ಸಂತುಷ್ಟರಾಗುತ್ತಾರೆ. ದೋಷ ಪರಿಹಾರವಾಗುತ್ತೆ."

ರಘು ಒಂದು ಗಳಿಗೆ ಸುಮ್ಮನಿದ್ದು 'ಆಗಲಿ' ಎಂದ

ಸರಸಿ ಸತ್ಯನಾರಾಯಣನ ಪೂಜೆಯ ಏರ್ಪಾಡು ಮಾಡಿಕೊಂಡು ನೆಂಟರಿಷ್ಟರನ್ನು ಕಲೆಯಲು ಹೊರಟಾಗ ರಘು ಕೇಳಿದ "ಮೋಹಿನಿಯನ್ನು ಕರೆಯುತ್ತೀಯಷ್ಟೆ?"

"ಬಿಡಿ, ಬಿಡಿ, ಅವಳನ್ನೇನು ಕರೆಯುವುದು? ಒಂದಿನವಾದರೂ ಅವಳಾಗಿ ಬರಲಿಲ್ಲ. ನಾವೇಕೆ ಕರಿಯೋಣ?"

"ಇರುವವಳು ಒಬ್ಬಳೆ. ಕರೆದರೆ ಬಂದು ಹೋಗುತ್ತಾಳೆ."

"ನಾನು ಖಂಡಿತ ಕರೆಯೊಲ್ಲ!"

ತಲೆಯಾಡಿಸುತ್ತ ದೃಢ ಕಂಠದಿಂದ ಹೇಳಿದಳು ಸರಸಿ.

ರಘು ಯೋಚಿಸಿದ. ತಾನು ಅವಳನ್ನು ಕರೆಯದಿದ್ದುದು ತಪ್ಪಾಗಿದೆ. ಆಗಲೇ ಎಂಟೊಂಭತ್ತು ವರ್ಷಗಳಾದುವು. ಈ ನೆವದಲ್ಲಾದರೂ ಕರೆಯ ಬಹುದಾಗಿತ್ತು. ಮಡದಿಯ ಹಠ ಮೊದಲಿಂದಲೂ ಅವಳನ್ನು ದೂರ ಮಾಡಿತು. ಈಗಲೂ ಕರೆಯಲೊಪ್ಪದ ಮಡದಿಯ ಮಾತಿಗೆ ಎದುರು ಹೇಳಲಾರದೆ ಸುಮ್ಮನಾದ.

ವ್ರತ ಅದ್ದೂರಿಯಿಂದ ನಡೆಯಿತು. ಬಹು ಮಂದಿ ಆಹ್ವಾನಿತರಿಗೆ ಪ್ರಸಾದ ವಿನಿಯೋಗಿಸಿ ಭೋಜನ ನೀಡಿದಾಗ ನೆರೆಮನೆಯ ಗೃಹಿಣಿ ಸರಸಿಯನ್ನು ಕೇಳಿದಳು "ಮೋಹಿನಿಯನ್ನು ನೀವು ಈಗಲೂ ಕರೆಯಲಿಲ್ಲವೇ?"

"ಹುಡುಗಿ ಸಾಮಾನ್ಯಳಲ್ಲ, ತುಂಬ ಗರ್ವಿ. ಒಮ್ಮೆಯಾದರೂ ಈ ಮನೆ ಮೆಟ್ಟಲು ಹತ್ತಲಿಲ್ಲ. ನಾವೇಕೆ ಕರೆಯೋಣ?"

"ಪಾಪ, ನಿನ್ನ ಮಕ್ಕಳನ್ನು ಸಾಕಿದ್ದಾಳೆ. ಈ ಮನೆ ಕಸ ಎಷ್ಟು ಬಳಿದಿದ್ದಾಳೆ. ಅದನ್ನೆಲ್ಲಾ ನೆನೆಸಿಕೊಳ್ಳಬಾರದೇ? ಹೊರಕೊಟ್ಟಮೇಲೆ ಅಣ್ಣ ಅತ್ತಿಗೆ ಕರೆಯದೆ ಅವಳಾದರೂ ಹೇಗೆ ಬಂದಾಳು?" ಎದೆಯ ಅಳಲನ್ನು ಒಳಗೇ ಹುಗಿದಿಟ್ಟು ನುಡಿದಳು ಅವಳು.

"ಅವಳೇ ಬಂದು ಹೋಗಬೇಕಿತ್ತು. ಬರದಿದ್ದರೆ ನಾವು ಏಕೆ ಕರೆಯೋಣ?"

"ಸುಮ್ಮನಿರು ಸರಸಕ್ಕ, ನಿನ್ನ ಹಠವೇ ಹಠ. ನಿನ್ನ ಮಕ್ಕಳಂತೆಯೇ ಅವಳು."

ಆ ಕೂಡಲೇ ಯಾವುದೋ ನೆವದಿಂದ ಜಾರಿಕೊಂಡಳು ಸರಸಿ.

ಇತರೆ ಕೆಲವರು ಅದೇ ಪ್ರಶ್ನೆಯನ್ನು ರಘುವಿಗೂ ಹಾಕಿದರು. ಅವನೂ ಯಾವುದೋ ನೆವ ಹೇಳಿಕೊಂಡು ಜಾರಿದ್ದ. ಬಂಧು ಬಳಗ ಒಡಲಾಳದಲ್ಲಿ ಕಸಿವಿಸಿ ತುಂಬಿಕೊಂಡರೂ ಸಂತೋಷದ ಮುಖವಾಡ ತೊಟ್ಟು ದಂಪತಿಗಳಿಗೆ ಶುಭ ಹಾರೈಸಿ ಹೊರಟರು. ಗಜಿಬಿಜಿಗೊಂಡಿದ್ದ ಮನೆ ತಣ್ಣಗಾಯಿತು.

ನೆರೆಮನೆಯ ಸಮನಾ ಮೋಹಿನಿಯ ಆಪ್ತ ಗೆಳತಿ. ಅವಳು ತನ್ನ

ಪಾಲಿಗೆ ಬಂದ ಪ್ರಸಾದ ಮತ್ತು ಸಿಹಿಯನ್ನು ತೆಗೆದುಕೊಂಡು ನೇರವಾಗಿ ಮೋಹಿನಿಯ ಮನೆಗೆ ಬಂದಳು.

ಬಾಗಿಲ ಬಳಿ ಕುಕ್ಕೂ ಕುಕ್ಕೂ ಸದ್ದು ಕೇಳಿ ಬರುತ್ತಲೂ ಮೋಹಿನಿ ಕದ ತೆರೆದು ನೋಡುತ್ತಾಳೆ, ಆಪ್ತ ಗೆಳತಿ ಸುಮನಾ. ಒಮ್ಮೆಗೇ ಅವಳನ್ನು ಗಾಢಾಲಿಂಗನೆ ಮಾಡಿಕೊಂಡು ಸ್ವಾಗತಿಸಿದಳು ಮೋಹಿನಿ.

"ಅವಳು ಒಳಬಂದು "ಇದು ಏನಿರಬಹುದು ಊಹಿಸು?"

"ಬಹುಶಃ ನಿಮ್ಮ ಮನೆಯಲ್ಲಿ ಮಾಡಿದ್ದಿರೇನೋ..."

'ಅಲ್ಲಿ, ಅಲ್ಲವೇ ಅಲ್ಲ!"

"ದೇವಾಲಯದಿಂದ ತಂದೆಯಾ?"

"ಅ...ಲ್ಲ. ಸರಿಯಾಗಿ ಯೋಚಿಸಿ ಹೇಳು."

"ನಿನ್ನ ಗೆಳತಿಯ ಮನೆಯಿಂದಲೇ?"

"ಅಯ್ಯೊ, ಮರಳೆ! ನಾನು ತಂದದ್ದು ನಿಮ್ಮ ಮನೆಯಿಂದ!"

"ಅಂದರೇ...." ಸ್ವಲ್ಪ ಹೊತ್ತು ಯೋಚಿಸಿ "ಅಣ್ಣನ ಮನೆಯಿಂದ ತಂದೆಯಾ!" ಎಂದಳು ಆಶ್ಚರ್ಯಚಕಿತ ದೃಷ್ಟಿಯಿಂದ ನೋಡುತ್ತ.

"ಹೌದು!"

"ಸರಸಕ್ಕ ಕೊಟ್ಟರೆ? ಎಂತಹ ಆಶ್ಚರ್ಯ?"

"ನಿನಗಲ್ಲ ಕೊಟ್ಟದ್ದು! ನನಗೆ!"

"ಹೌದಾ?"

"ಮನೆಯೆಲ್ಲಾ ಹೊಡೆದುಹಾಕಿ ಹೊಸಮನೆ ಮಾಡಿದ್ದಾರೆ. ಅದ್ಧೂರಿಯ ಸತ್ಯನಾರಾಯಣ ವ್ರತ. ನೂರಾರು ಮಂದಿಗೆ ಊಟ. ನಿನ್ನೊಬ್ಬಳನ್ನು ಕರೆದಿದ್ದರೆ ಅದೇನು ಗಂಟು ಸೂರೆಯಾಗುತ್ತಿತ್ತೊ...ನನಗೇಕೋ ಬೇಸರವಾಯ್ತು. ನಮ್ಮ ಮನೆಯಿಂದ ನಿನಗಿಷ್ಟು ತಂದೆ."

"ಏಕಷ್ಟು ಶ್ರಮ ವಹಿಸಿದೆ...? ಇಲ್ಲದಿದ್ದರೆ ಏನೂ ತೊಂದರೆ ಯಾಗುತ್ತಿರಲಿಲ್ಲ."

"ಪ್ರಸಾದವಾದ್ದರಿಂದ ತಂದೆ. ತೆಗೆದುಕೊ. ಅವರು ಕೊಡದಿದ್ದರೇನು? ನಾನು ಕೊಡುತ್ತಿರುವೆ." ಎಂದಳು ಅತ್ಯಂತ ಆದರ ವಿಶ್ವಾಸಗಳ ಪ್ರತೀಕವೇ ಆಗಿ.

"ಆಗಲಿ, ನೀನು ತಂದುಕೊಟ್ಟ ಮೇಲೆ ಒಲ್ಲೆ ಎನ್ನಲಾರೆ"

ಮೋಹಿನಿ ಬೊಗಸೆಯೊಡ್ಡಿ ಪ್ರಸಾದ ಸ್ವೀಕರಿಸಿದಳು. ಕಣ್ಣುಗಳಲ್ಲಿ ಸಣ್ಣಗೆ ಬೆಳ್ಳಿಗೆರೆಯಂತೆ ನೀರಾಡಿತು. ಆದರೂ ಅದನ್ನು ತೋರಗೊಡದಿರಲು ಕೈ ತೊಳೆಯುವ ನೆವದಲ್ಲಿ ಬಚ್ಚಲಿಗೆ ಹೋಗಿ ಮುಖ ಮಜ್ಜನ ಮಾಡಿ ಬಂದನಂತರ ನುಡಿದಳು "ಸುಮನಾ, ನನ್ನ ವಿಚಾರ ಬಿಟ್ಟುಬಿಡು. ಅಮ್ಮ-ಅಪ್ಪ ಮೊದಲೇ ಹೋಗಿದ್ದು ಎಷ್ಟು ಒಳ್ಳೆಯದಾಯ್ತು ಅಲ್ಲವೇ? ಒಂದು ವೇಳೆ ಬದುಕಿದ್ದರೆ ಇವರು ಎಷ್ಟು ಚೆನ್ನಾಗಿ ನೋಡುತ್ತಿದ್ದರೇ ಹೇಳು?ದೇವರೇ ಸಾಕು ಮಾಡಿದ."

"ನಿಜ ಮೋಹಿನಿ!"

ಮೋಹಿನಿ ಪ್ರಸಾದ ಪಡೆದು ಗೆಳತಿಗೆ ಆದರಾತಿಥ್ಯ ನಡೆಸಿ ಹೇಳಿದಳು "ಈ ಮನೆ ಚಿಕ್ಕದಾದರೂ ಚೊಕ್ಕವಾಗಿದೆ.ಇಡೀ ಕಾಲೋನಿಯೆಲ್ಲಾ ಹೀಗೆಯೇ ಎರಡೆರಡು ಕೊಠಡಿಗಳ ಮನೆಗಳು. ಇಲ್ಲಿ ನನ್ನ ಮನಸ್ಸಿಗೊಪ್ಪುವಂತಹ ಗೆಳತಿಯರಾರೂ ದೊರೆಯಲಿಲ್ಲ. ಎಷ್ಟೆಂದರೂ ವಿದ್ಯಬುದ್ಧಿಯಿಲ್ಲದ ಜನ. ನಮ್ಮ ಮನೆ ಮತ್ತು ಶಾಲೆ ಕಾಲೇಜುಗಳಲ್ಲಿ ದೊರಕಿದಂತಹ ಗೆಳತಿಯರು ಇನ್ನೆಲ್ಲಿಯೂ ಸಿಕ್ಕಲಾರರು ಬಿಡು. ನನಗೆ ಬೇಸರವಾದಾಗಲೆಲ್ಲಾ ಗತಕಾಲವನ್ನು ಸ್ಮರಿಸುತ್ತ ಕಾಲಹರಣ ಮಾಡುವೆ."

"ಪಾಪ, ಮೋಹಿನಿ!"

"ಸುಮನಾ! ನಾವು ಭಾಲ್ಯದಲ್ಲಿ ಯಾವ ಸುಖ ಸಂಪತ್ತು ಪಡೆದು ಕೊಂಡಿರುತ್ತೇವೋ ಅದನ್ನೇ ಪ್ರಸಾದ ಎಂದುಕೊಳ್ಳಬೇಕು ಅಷ್ಟೆ."

"ಸತ್ಯ ಮೋಹಿನಿ."

"ನಮ್ಮದು ಎಷ್ಟೆಷ್ಟು ಜನ್ಮಗಳ ಕರ್ಮಾಂತರವೋ ದೇವರಿಗೇ ಗೊತ್ತು."

"ಹೋಗಲಿ, ಬಿಡು ನೀಡಿದವನು ಪರಮಾತ್ಮ."

"ಗೋಪು ಹೋಗಿ ನಾಲ್ಕುದಿನಗಳಾದುವು. ಮನೆಯಲ್ಲಿ ಸಾಮಗ್ರಿಯಿಲ್ಲ. ಅವನು ಧರ್ಮ-ಕರ್ಮ ಅರಿಯದ ಹುಂಬ. ದಯೆ-ಕರುಣೆಗಳು ಇಲ್ಲವೇ ಇಲ್ಲ. ಕ್ರೂರಿ ಅಂದರೆ ಕ್ರೂರಿ. ಸಾಮಗ್ರಿ ಅಥವಾ ಕಾಸು ಎರಡೂ ಇಲ್ಲದಿದ್ದರೆ ಹಸು ಮಕ್ಕಳ ಗತಿಯೇನು? ಎಂದು ಒಂದೆರಡು ಗಳಿಗೆ ಸುಮ್ಮನಾದ ಮೋಹಿನಿ ಪುನಃ "ನನಗೊಂದು ಗಂಡು ಮಗು ಬೇಕು ಎಂದು ಅವನ

ಹಠ. ನನಗಂತೂ ಪ್ರಾಣಹಿಂಸೆ!"

ಹಿಂದೂಸ್ಥಾನದಲ್ಲಿ ಇಂಥ ಜೀವನದಿಂದ ಬಿಡುಗಡೆ ಸುಲಭ ಸಾಧ್ಯವಾಗಿದ್ದಿದ್ದರೆ ಕಷ್ಟವಿರಲಿಲ್ಲ. ಪುರುಷವರ್ಗ ಸ್ವಸುಖಕ್ಕಾಗಿ ನಿರ್ಮಿಸಿದ ಕಾನೂನು ಹೆಣ್ಣನ್ನು ಕ್ಷಣಕ್ಷಣಕ್ಕೂ ಕೊಲ್ಲುತ್ತಿದೆ. ಇಂದಿನ ಧೀಮಂತರೂ ವಿದ್ಯಾವಂತರೂ ಕಣ್ಣು ಕಟ್ಟಿದ ಕುದುರೆಗಳಂತೆ ಒಂದೇ ನೇರಕ್ಕೆ ಓಡುತ್ತಿದ್ದಾರೆ. ಅಷ್ಟೆ ಅಲ್ಲ, ವಿದ್ಯಾವಂತ ಸ್ತ್ರೀ ಮಂಡಳಿ ಕೂಡ ಅನುಭವಿಸಿಕೊಂಡು ಮೂಕ ಮೌನಿಯಾಗಿರುವುದೂ ವಿಶೇಷವೇ. ನಮ್ಮ ಸಂಸ್ಕಾರ ಸ್ತ್ರೀಯರನ್ನು ಹೆಜ್ಜೆ ಹೆಜ್ಜೆಗೂ ಹಿಮ್ಮೆಟ್ಟಿಸುತ್ತದೆ. ಅದೇ ನಮ್ಮ ದುರ್ಬಲತೆ. ನಾವು ಸ್ವನಿಷ್ಠೆಯನ್ನು ಕಂಡುಕೊಳ್ಳದಿದ್ದರೆ ಆಗುವುದೇ ಹೀಗೆ."

ಮೋಹಿನಿ ವಿಷಾದವಾಣಿಯಲ್ಲಿ "ಅಯ್ಯೋ, ದೇವರೆ! ನೀನು ಎಷ್ಟು ಸುಲಭವಾಗಿ ನುಡಿಯುತಿದ್ದೀ! ಬಾಯ್ದೆರೆದರೆ ಮೂಲೆ ಮೂಲೆಯಲ್ಲಿದ್ದ ಕತ್ತಿ, ಚೂರಿ, ದೊಣ್ಣೆಗಳೆಲ್ಲಾ ಎಚ್ಚೆತ್ತುಕೊಳ್ಳುತ್ತವೆ. ಅದು ನಿನಗೆ ಗೊತ್ತೇ ಇಲ್ಲವೇ?"

"ಗೊತ್ತು ಮೋಹಿನಿ! ಗೊತ್ತು! ಆದರೂ, ಒಂದು ಸಣ್ಣ ಆಶಾಕಿರಣ...."

"ಆ ಆಶಾಕಿರಣ ಉಳಿಸಿಕೊಂಡಿದ್ದೇ ತಪ್ಪು ಎನಿಸುತ್ತೆ ನನಗೆ. ಈ ವಯಸ್ಸಿಗಾಗಲೇ ಎಲ್ಲಾ ಅನುಭವವೂ ಆಗಿದೆ. ನಾವು ಜ್ಞಾನಿಗಳಾಗಿರುವುದಕ್ಕಿಂತ ಅಜ್ಞಾನಿಗಳಾಗಿರುವುದೇ ಲೇಸು ಎಂದರೂ ತಪ್ಪಲ್ಲ. ಏಕೆಂದರೆ, ನಾವು ಬಾಳಿನ ಲಕ್ಷ್ಮಣರೇಖೆಯನ್ನು ದಾಟಿದರೆ ನಮ್ಮ ಕತೆ ಮುಗಿಯುತ್ತೆ. ಸೀತೆ ಅಗ್ನಿ ಪರೀಕ್ಷೆಯಲ್ಲಿ ಗೆದ್ದಳೆಂದರೆ ನಾವು ಗೆಲ್ಲುವುದು ಸಾಧ್ಯವೇ ಹೇಳು? ನಾವು ಸುಟ್ಟು ಭಸ್ಮವಾಗುವುದು ಮಾತ್ರವಲ್ಲ, ಕುಲಕೋಟಿಯನ್ನೇ ಜಾಲಾಡಿಸಲು ನಾಲಿಗೆಗಳು ಹುರಿಗೊಳ್ಳುತ್ತವೆ. ಇದೆಲ್ಲಾ ನಿನಗೆ ಗೊತ್ತಿಲ್ಲದಿಲ್ಲ ಬಿಡು."

"ಇದಕ್ಕೆಲ್ಲಾ ಪರಿಹಾರವೇನು?"

"ಇನ್ನೂ ಒಂದೋ ಎರಡೋ ಶತಮಾನ ಕಳೆಯಬೇಕು. ಈಗಿನ ಪೀಳಿಗೆ ಹೋಗಿ ಮುಂದಿನ ಪೀಳಿಗೆ ಎಚ್ಚೆತ್ತುಕೊಂಡರೆ ಸುಧಾರಣೆ. ಇಲ್ಲದಿದ್ದರೆ ಇಲ್ಲ. ಇದೇ ಪಾಡು ಕೊನೆಗೂ."

"ನಿಜ ಮೋಹಿನಿ."

"ಹೆಣ್ಣಾಗಿ ಹುಟ್ಟಬಾರದು."

"ಅದು ನಮ್ಮ ಕೈಯಲಿಲ್ಲ. ಬಿಡು. ನಾವು ಎಲ್ಲಿಯೇ ಇದ್ದರೂ ನಮ್ಮ ಸುತ್ತಮುತ್ತ ಸಮಾಜ ಪ್ರಾಕಾರವಿದ್ದೇ ಇರುತ್ತದೆ. ಇದನ್ನು ದಾಟಿ ಎಂದೆಂದೂ ನಾವು ಹೊರಹೋಗಲಾರೆವು. ಅಂದಮೇಲೆ ಇದ್ದುದನ್ನೇ ಸರಿಪಡಿಸಿಕೊಳ್ಳುವುದಾಗಲೀ ಹೊಂದಿಸಿಕೊಳ್ಳುವುದಾಗಲೀ ನಮ್ಮಿಂದ ಸಾಧ್ಯವೇ ಹೊರತು ಇನ್ನಾವ ಸಾಧನೆಯೂ ನಮ್ಮಿಂದಾಗದು."

"ಅದರಿಂದಾಗಿಯೇ ನಾವು ಸ್ವತಂತ್ರ ಜೀವನಕ್ಕೆ ಬುನಾದಿ ಹಾಕುವುದು ಒಳ್ಳೆಯದು. ನನಗೇನಾದರೂ ಸ್ವಲ್ಪ ಆರ್ಥಿಕ ಸಹಾಯ ದೊರೆತರೆ ಬೇರೊಂದು ಸಣ್ಣ ಮನೆ ಮಾಡಿಕೊಂಡು ಬಾಲವಾಡಿ ನಡೆಸುವೆ. ನನ್ನ ವಾಸ್ತವ್ಯವೂ ಅಲ್ಲೇ...."

"ನಿನ್ನ ಗೋಪು ಬಿಟ್ಟರಷ್ಟೆ?"

ಮೋಹಿನಿಯ ಮುಖ ಮುದುಡಿತು.

ಸುಮನಾ ಹೊರಟಳು. ಅವಳೊಂದಿಗೆ ನಡೆಯುತ್ತ ರಸ್ತೆಯ ದೂರದ ತಿರಿವಿನವರೆಗೂ ಹೋಗಿ ಅತ್ಯಂತ ಆತ್ಮೀಯತೆಯಿಂದ ಕಳುಹಿಸಿ ಬಂದಳು ಮೋಹಿನಿ.

* * *

ಸಾಂಧ್ಯ ಸೂರ್ಯ ಸ್ವರ್ಣದುಂಡೆಯಂತೆ ಪಶ್ಚಿಮ ಘಟ್ಟಗಳ ನೆಲೆಗೆ ಇಳಿದಿದ್ದ.

ತಂಗಾಳಿಯ ಶೀತಲ ಮೃದು ಸ್ಪರ್ಶ ಮೈಮನಗಳಿಗೆ ಎಂತಹ ಆಹ್ಲಾದಕರವೋ.....ಗಿಡಮರಗಳ ರೆಂಬೆಗಳಲ್ಲಿ ಉಲಿಯುವ ಪಕ್ಷಿಗಳ ಸಂಧ್ಯಾರಾಗವೂ ಅಷ್ಟೆ ಮಧುಕರ.

ಎರಡೂ ಕೈಗಳಲ್ಲಿ ಸರಳನ್ನು ಹಿಡಿದುಕೊಂಡು ಅಸ್ತವಾನ ಸೌಂದರ್ಯವನ್ನು ಕತ್ತುಂಬ ನೋಡುತಿದ್ದ ಮೋಹಿನಿ "ಈ ಜಗತ್ತು ಎಷ್ಟೊಂದು ಮಧುರ ಸುಂದರ? ಎಷ್ಟೊಂದು ನೀತಿ ನಿಯಮ ಬದ್ಧ? ಎಷ್ಟೊಂದು ಆಗಾಧ-ಅದ್ಭುತ? ಆದರೂ ಈ ನರಜಂತುಗಳು ಏಕೆ ಹೀಗಿದ್ದಾರೆ? ಅದೇ ಅರ್ಥವಾಗುವುದಿಲ್ಲ;" ಎಂದು ಕೊಂಡಾಗ ಎದೆಯಾಳದಿಂದ ನಿಟ್ಟುಸಿರೊಂದು ಹೊರಬಿತ್ತು. ಹೃದಯ ಕಲ್ಲು ಹೊತ್ತಷ್ಟು ಭಾರಾತಿಭಾರ. ಹಾಗೆ ಮೈ ಮರೆತು ಮನವಟ್ಟಂತೆ ಎಷ್ಟು ಹೊತ್ತು ನಿಂತಿದ್ದಳೋ, ಸೂರ್ಯ

ಮುಳುಗಿದ, ಮುಸ್ಸಂಜೆ ಮೆಲ್ಲ ಮೆಲ್ಲನೆ ಆವರಿಸಿತು.

ಹೊರ ಮೆಟ್ಟಲಿನ ಮೇಲೆ ಕುಳಿತಿದ್ದ ಮಕ್ಕಳು ಒಳಬಂದರು. ಹೊಟ್ಟೆ ಹಸಿವಿನಿಂದ ಮುಖ ಮುದ್ರೆ ಖಿನ್ನವಾಗಿತ್ತು. ಡಬ್ಬದಲ್ಲಿ ಅರ್ಧಪಾವಿನಷ್ಟು ಅಕ್ಕಿ ಮಾತ್ರವಿತ್ತು. ಅದನ್ನೇ ಒಲೆಗಿಟ್ಟು ಗಂಜಿ ಮಾಡಿ, "ಅಗ್ನಿಸಾಕ್ಷಿ"ಯಾಗಿ ಊಟದ ಶಾಸ್ತ್ರ ಮುಗಿಸಿ ಮಕ್ಕಳೊಂದಿಗೆ ಹಾಸಿಗೆ ಸೇರಿದಳು. ದೈಹಿಕ ಶ್ರಮ–ಮಾನಸಿಕ ಶ್ರಮಗಳಿಂದ ಜೀವ ಬಳಲಿತ್ತು. ಬಹಳ ಹೊತ್ತು ನಿದ್ರೆ ಈ ಬಳಿಯಲ್ಲಿ ಸುಳಿಯಲಿಲ್ಲ. ಬ್ರಾಹ್ಮೀಮುಹೂರ್ತ ಕಳೆದು ತಣ್ಣಗೆ ತಂಗಾಳಿ ತೀಡಿದ ಮೇಲೆ ಕಣ್ಣಿಗೆ ನಿದ್ದೆ ಮೆಲ್ಲನೆ ಆವರಿಸಿತು.

ಅದೇ ಮನೆ. ಅದೇ ಪಡಸಾಲೆ. ತಂದೆತಾಯಿ ಇಬ್ಬರೂ ಕುಳಿತಿದ್ದಾರೆ. ಬಿಸಿ ಬಿಸಿ ಉಪಹಾರ ಮೆಲ್ಲುತ್ತಾ "ಮೋಹಿನಿ! ಮೋಹಿನಿ! ಏನು ಮಾಡುತ್ತಿದ್ದೀ? ಏಕಮ್ಮಾ ಬರಲಿಲ್ಲ?" ಕರೆದಳು ತಾಯಿ. ಆ ಕರೆಯಲ್ಲಿ ಎಂತಹ ಮಾಧುರ್ಯ? ಅಲ್ಲ–ಅಲ್ಲವೇ ಅಲ್ಲ. ಎಂತಹ ಪ್ರೀತಿ? ಎದೆಯಾಳದಿಂದ ಹರಿದು ಬಂದ ದನಿಯಲ್ಲಿ ಅಕ್ಕರೆಯ ತನಿರಸವೇ ಹರಿದು ಬಂತು. ಮೋಹಿನಿ ಅವರೊಂದಿಗೆ ಉಪಹಾರದಲ್ಲಿ ಪಾಲ್ಗೊಂಡಳು. ಮೂರು ಲೋಟಗಳಲ್ಲಿ ಬಿಸಿಬಿಸಿ ನೊರೆ ಹಾಲು. ಆತ್ಮೀಯ ಬಾಂಧವ್ಯದೊಡನೆ ಹೊತ್ತು ಸಾನಂದದಿಂದ ಉರುಳಿತು.

ಉಪಹಾರದ ನಂತರ ತಂದೆತಾಯಿಯರು ಎಲ್ಲಿಗೋ ಹೊರಟಿದ್ದಾರೆ. ಮೋಹಿನಿಗೆ ನಾನು ಹೋಗಬಾರದೇಕೆ? ಎಂಬ ಯೋಚನೆ. ಹೊರಡುವ ತರಾತುರಿ. ಆದರೆ ಅಲ್ಲಿಂದಲೇ ಕೂಗಿ ಹೇಳಿದಳು "ಈಗಲೇ ಬೇಡ ಮಗಳೇ! ಇನ್ನೊಮ್ಮೆ ಬಂದರಾಯಿತು. ಅವಸರ ಬೇಡ."

"ಅಮ್ಮಾ....! ಗೋಗರೆದಳು ಮೋಹಿನಿ.

ಆದರೆ, ಅವರು ಇದ್ದರಷ್ಟೆ? ಯಾವ ಕ್ಷಣದಲ್ಲಿ ಮಾಯವಾದರೋ ಧಿಗ್ಭ್ರಮಿತಳಾದಳು ಮೋಹಿನಿ. ಹೊದ್ದಿಕೆಯನ್ನು ತಳ್ಳಿ ಬಿರಿಬಿರಿ ಕಣ್ಣು ಬಿಟ್ಟರೆ ಎಲ್ಲಿದ್ದಾರೆ ತಾಯಿ ತಂದೆ? ಒಂದೇ ಕ್ಷಣದಲ್ಲಿ ಸುಖ–ದುಃಖ ಎರಡನ್ನೂ ಕಂಡೆ. ಅವರಿನ್ನೂ ಸ್ವಲ್ಪ ಹೊತ್ತು ಇದ್ದಿದ್ದರೆ ಆನಂದಿಸಬಹುದಾಗಿತ್ತು. ಕೆಲವೇ ಕ್ಷಣಗಳಿಗಾಗಿ ಏಕೆ ಬಂದು ಹೋದರೋ? ಭಗವಂತ! ಈ ಜೀವನ ಎಷ್ಟು ಕ್ಷಣಿಕ?

ದೂರದಲ್ಲೆಲ್ಲೋ ಕೋಳಿ ಹುಂಜನ ಕೂಗು ಕೊಕ್ಕೋ ಕೋ! ಆ

ಹುಂಜ ಎಷ್ಟೊಂದು ದೃಢವಾದ ದನಿಯಲ್ಲಿ ಕೂಗುತ್ತಿದೆ?

ಅದಕ್ಕೆ ಗೊತ್ತೇ ನಾಳೆಯ ಗತಿ?

ಎದೆಯಾಳದಿಂದ ನಿಟ್ಟುಸಿರೊಂದು ಹೊರಹೊಮ್ಮಿತ್ತು. ನೋಟ ಕಿಟಕಿಯ ಕಡೆ ಹರಿದಾಗ ಜಗಜಗಿಸುವ ತಾರೆ ದೃಷ್ಟಿಗೆ ಬಿತ್ತು. ಹಾ! ದೈವ ಸೃಷ್ಟಿಯೇ ಆದ ಮಾನವ ಜಂತುಗಳು?

ಕೊಚ್ಚೆಯ ಹುಳುಗಳು....ಕೊಚ್ಚೆಯ ಹುಳುಗಳು!

೨೧

ಮೋಹಿನಿ ಹಾಸಿಗೆ ಬಿಟ್ಟಾಗ ಹೊತ್ತು ಮೂಡಿತ್ತು.

ಅವಳು ಯಾವತ್ತೂ ಏಳುತಿದ್ದುದು ಹೊತ್ತಿಗೆ ಮುಂಚೆಯೇ. ಇಂದು ಒಲೆ ಹಚ್ಚಲು ಕಾಳುಗಳಿಲ್ಲದ ಕಾರಣ ಎದ್ದುಮಾಡುವುದಾದರೂ ಏನು? ತನಗೂ ತಾಳಲಾಗದ ಹಸಿವು. ನಿನ್ನೆ ಅರ್ಧರೊಟ್ಟಿಯನ್ನು ಮಕ್ಕಳಿಗೆ ಕಾಣದಂತೆ ಉಳಿಸಿಕೊಂಡಿದ್ದಾಳೆ. ಅದನ್ನೇ ಮೂವರಿಗೂ ಹಂಚಿದರಾಯಿತು, ಎಂಬ ಯೋಚನೆ, ಮಧ್ಯಾಹ್ನಕ್ಕೇನು ಮಾಡುವುದು ಎಂಬ ಪ್ರಶ್ನೆ. ನಾನಾ ವಿಚಾರಗಳು ತಲೆಯನ್ನು ತಾವೇ ತಾವಾಗಿ ಮುತ್ತುತ್ತವೆ. ಕೆಲವು ನಿಮಿಷಗಳಾದರೂ ಹಾಯಾಗಿರೋಣವೆಂದರೆ ಅವು ಬಿಡಬೇಕಲ್ಲ? ಚಿಂತೆ ಚಿಂತೆ ಚಿಂತೆ ತಲೆ ತುಂಬಾ ಚಿಂತೆ. ಮೋಹಿನಿ ಏಳಲಾರದೇ ಎದ್ದು ಮುಖ ಮಜ್ಜನ ಮಾಡಿ ಬಂದಳು.

ನೀನಾ–ಮೀನಾ ಹಾಸಿಗೆಯಲ್ಲೇ 'ಹಸಿವು' ಎನ್ನುತಿದ್ದಾರೆ. ಕಣ್ಣುಗಳಲ್ಲಿ ನೀರಾಡುತ್ತಿದೆ. ಕ್ಷೀಣಿತ ಧ್ವನಿ ಕರುಳು ಕೊಯ್ಯುವಷ್ಟು ಸಂಕಟಕರ.

ಹೇಳಲಾರದೇ ಹೇಳಿದಳು ಮೋಹಿನಿ "ಮುಖ ತೊಳೆದುಕೊಂಡು ಬನ್ನಿ! ರೊಟ್ಟಿಕೊಡುವೆ."

ಮಕ್ಕಳು ಸಂತುಷ್ಟರಾದರೂ ಅವರ ತೀವ್ರ ಹಸಿವು ಪೂರೈಸುವುದಿಲ್ಲವಲ್ಲಾ ಎಂಬ ಸಂಕಟ ತಾಯಿಗೆ. ಆ ಅರ್ಧರ್ಧರೊಟ್ಟಿಯ ತುಣುಕು ಯಾವ ಮೂಲೆಗೆ?

ಮೂವರೂ ರೊಟ್ಟಿಯ ಆಸೆಯಿಂದಲೇ ಮುಖ ಮಜ್ಜನ ಮಾಡಿದರೇನೋ ...ಓಡುತ್ತಲೇ ಬಂದರು ತಾಯಿಯ ಬಳಿಗೆ. ಅವಳು ಹಸಿದ ಮಕ್ಕಳನ್ನು ನೋಡಿದಳು. ಮೂವರೂ ಸುತ್ತ ಮುತ್ತ ಮುಲುಗಾಡುತ್ತಿದ್ದಾರೆ. ಆ ಸಂಕಟಪೂರ್ಣ ದೃಶ್ಯ ಒಡಲ ಬಳ್ಳಿಯನ್ನು ಕತ್ತರಿಸುವಷ್ಟು ದುಃಖಭರಿತ. ಮೋಹಿನಿ ನಡೆಯಲಾರದೇ ನಡೆದಳು ಬೀರುವಿನ ಕಡೆಗೆ. ನಿನ್ನೆಯಿಂದ ಮುಚ್ಚಿಟ್ಟಿದ ಆ ರೊಟ್ಟಿಗೆ ಇರುವೆಗಳು ಪಾಲು ದಾರರಾಗಿವೆ. ಒಳಗೆಲ್ಲಾ ಕೊರೆಕೊರೆದು ಅರ್ಧದಷ್ಟು ತಿಂದು ಹಾಳು ಮಾಡಿದ್ದು ಒಡಲ ಸಂಕಟವನ್ನು ಇನ್ನಷ್ಟು ಹೆಚ್ಚಿಸಿತು. ಮೋಹಿನಿ ತೊಯ್ದ ಕಣ್ಣುಗಳನ್ನು ಒರಿಸಿಕೊಂಡು ರೊಟ್ಟಿಯನ್ನು ಕೊಡುವುತಿದ್ದರೆ ಮಕ್ಕಳ ಗೋಳು ಸಹಿಸಲಸಾಧ್ಯ. ಒಮ್ಮೆಗೇ ಹುಯಲಿಟ್ಟುವು ಮಕ್ಕಳು. ಮೋಹಿನಿ ಹೇಗೆ ಹೇಗೋ ಸಮಾಧಾನಿಸಿ ರೊಟ್ಟಿಕೊಟ್ಟು ನುಡಿದಳು "ಸಕ್ಕೂ, ಇಂದು ಅಡಿಗೆ ಸಾಮಗ್ರಿ ಏನೇನೋ ಉಳಿದಿಲ್ಲ. ಏನು ಮಾಡೋಣ?

"ಆಫೀಸಿನಲ್ಲಿ ಅಪ್ಪನ ಸಂಬಳದಿಂದ ಅರ್ಧ ತೆಗೆದುಕೊಳ್ಳೋಣ. ನಮ್ಮವರು ಇಂತಹ ಸಂದರ್ಭದಲ್ಲಿ ಕೇಳಿ ತರುತ್ತಾರೆ. ನಾವೂ ಹಾಗೇ ಮಾಡೋಣ. ಉಪವಾಸ ಇರುವುದಕ್ಕಾಗುತ್ತದೆಯೇ?"

ಸಕ್ಕೂ ಮಾತಿಗೆ ಒಪ್ಪಿದಳು ಮೋಹಿನಿ. ಇಬ್ಬರೂ ಆಫೀಸಿಗೆ ಕೂಡಿಯೇ ಹೋದರು. ಅವಳನ್ನು ಅಡಿಯಿಂದ ಮುಡಿಯುವರೆಗೆ ನೋಡಿದ ಸಬ್‌ಇನ್ಸ್‌ಪೆಕ್ಟರ್ ಕೇಳಿದ.

"ಮಧ್ಯಾಹ್ನ ಬರಲಾಗುತ್ತದೆಯೇ?"

"ಇಲ್ಲ ಸ್ವಾಮೀ! ಮನೆಯಲ್ಲಿ ಸಣ್ಣ ಸಣ್ಣ ಮಕ್ಕಳು. ಮಧ್ಯಾಹ್ನ ಊಟಕ್ಕೇ ಅಕ್ಕಿಯಿಲ್ಲ."

ಅವನು ಬಾಯಿಯಲ್ಲಿನ ಉಗುಳು ನುಂಗಲಾರ. ಉಗುಳಲಾರ. ಏನೋ ಹೇಳಬೇಕು. ಹೇಳಲಾರ, ಕಾಮ ಪಿಪಾಸೆ ಕಣ್ಣು, ಮುಖಗಳಲ್ಲಿ ಹೊಮ್ಮುತಿತ್ತು.

ಅವನ ಮನದಾಂದೋಳನವನ್ನು ಅರಿತ ಮೋಹಿನಿ "ನನಗೆ ಹೊತ್ತಾಯಿತು ಸ್ವಾಮೀ!" ಎಂದು ಕರ ಜೋಡಿಸಿದಳು.

ಸಬ್‌ಇನ್ಸ್‌ಪೆಕ್ಟರ್ ಒಂದೆರಡು ಕ್ಷಣ ತಡಬಡಿಸಿದ. ಏನೇನೋ ಮಸಲತ್ತು ಮನದಲ್ಲಿ. ಪೋಲೀಸನೊಬ್ಬ "ಸರ್, ಇವರು ಗೋಪು

ಮನೆಯವರು. ಅವರಿಗೆ ಹಣ ಕೊಡುವುದು ಸೂಕ್ತ," ಎಂದ.

ಸಬ್‌ಇನ್ಸ್‌ಪೆಕ್ಟರ್ ಅವಳಿಂದ ಸಹಿ ತೆಗೆದುಕೊಂಡು ಇನ್ನೂರು ರೂಪಾಯಿಗಳನ್ನು ಕೊಟ್ಟ. ಮೋಹಿನಿ ಬೇಕು ಬೇಕಾದ ಸಾಮಗ್ರಿಗಳನ್ನು ಕೊಂಡುಕೊಂಡು ಅಂದಿನ ಅಗತ್ಯವನ್ನು ಪೂರೈಸಿಕೊಂಡಳು.

* * *

ಮಧ್ಯಾಹ್ನ ಬೇಕರಿಯಲ್ಲಿ ಪಾತ್ರೆಗಳನ್ನು ಜೋಡಿಸಿ ಹೊರ ಬರುತ್ತಿದ್ದಂತೆಯೇ ಕಾರೊಂದು ಬಂದು ನಿಂತಿತು. ಅದರಿಂದ ಅಣ್ಣ ಅತ್ತಿಗೆಯರು ಇಳಿದುದನ್ನು ಕಂಡು ಮೋಹಿನಿ ತೆಕ್ಕನೆ ಒಳ ಸರಿದರೂ ಅವರ ಕಣ್ಣಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಹೃದಯ ವ್ಯಾಪ್ತಿಗೆ ಮೀರಿ ಮಿಡಿಯಿತು. ದಡ. ದಡ. ದಡ. ದಡ. ಕೈಕಾಲುಗಳ ಬಲ ಉಡುಗುವಂತೆ.

ಇಬ್ಬರೂ ಬೇಕು ಬೇಕಾದ ವ್ಯಾಪಾರಕ್ಕೆ ಕೈ ಹಚ್ಚಿ ತಮ್ಮ ಮನೆಯ ಪಾರ್ಟಿಗಾಗಿ ಕೇಕು ಬಿಸ್ಕತ್ತುಗಳನ್ನು ಬುಟ್ಟಿಗಟ್ಟಲೆ ಕೊಂಡುಕೊಂಡರು. ಕೆಲಸದ ಹುಡುಗ ಹೊರ ಹೋಗಿದ್ದ. ಬುಟ್ಟಿಯನ್ನು ಒಯ್ದು ಕಾರಿಗಿಡುವ ಕೆಲಸಕ್ಕೆ ಮೋಹಿನಿ ಹೋಗಬೇಕಾಗಿ ಬಂತು. ಇನ್ನು ತಾನು ಹಿಂಜರಿಯುವುದು ಸರಿಯಲ್ಲವೆಂದು ಹೊರಬಂದಳು ಮೋಹಿನಿ. ಲಜ್ಜೆ–ಸಂಕಟ–ಸಂಕೋಚಗಳು ಮನವನ್ನು ಗಾಣಕ್ಕೆ ಕೊಟ್ಟಂತೆ ಹಿಂಡುತಿದ್ದರೂ ನಗು ಮುಖದ ಸೋಗು ಹಾಕಿದಳು.

"ನೀನು ಏನು ಕೊಂಡುಕೊಂಡೆ....?" ಎಂದ ರಘು. ದನಿಯಲ್ಲಿ ಎಂದಿನ ಸಹಜತೆ ಏನೇನೂ ಇರಲಿಲ್ಲ. ನಾಟಕೀಯವಾದ ಅಣಕು ಮುಖದಲ್ಲಿ ಮುದ್ರೆಯೊತ್ತಿತ್ತು.

ಆಗ ಅವಳು ಕುಗ್ಗದೆ ದೃಢವಾದರೂ ಮೆಲು ದನಿಯಲ್ಲಿ ನುಡಿದಳು "ಮಕ್ಕಳಿಗಾಗಿ....."

"ಗೋಪು ಎಲ್ಲಿ?"

"ಮಂಗಳೂರಿಗೆ ಹೋಗಿದ್ದಾನೆ." ನುಡಿಯಲಾರದೆ ನುಡಿಯಿತು ನಾಲಿಗೆ.

"ಓಹೋ...." ಎಂದ ರಘು ಹಣ ಕಟ್ಟಲು ಕ್ಯಾಷ್ ಕೌಂಟರ್ ಕಡೆ ಹೋದ.

ಮೋಹನಿ "ಏನು ಸರಸಕ್ಕೆ ಮಾತೇ ಇಲ್ಲವಲ್ಲಾ?" ಎಂದು ತಾನಾಗಿಯೇ

ಮಾತನಾಡಿಸಿದಳು.

"ನನ್ನ ಗಮನ ಎಲ್ಲೋ ಇತ್ತು. ಹೇಗಿದ್ದಿ? ಮಕ್ಕಳೆಷ್ಟು?" ಎಂದಳು ಸಂಕುಚಿತ ಭಾವನೆಯಿಂದ. ಎದೆಯ ನಂಜೆಲ್ಲಾ ಮುಖಮುದ್ರೆಯಲ್ಲಿ ಮೂಡಿತು ದಪ್ಪ ದಪ್ಪ ಅಕ್ಷರಗಳಲ್ಲಿ.

"ಮೂವರು ಹೆಣ್ಣು ಮಕ್ಕಳು. ನಾನೇ ಎಷ್ಟೋ ಬಾರಿ ನೋಡಿ ಬರಬೇಕೆಂದು ಯೋಚಿಸಿದ್ದೆ. ಕೈಗೆ ಬಿಡುವಿಲ್ಲದೆ ಸುಮ್ಮನಾದೆ" ತನುಮನವೆಲ್ಲಾ ಮುಜುಗರವಾದರೂ ತೋರದೆ ನುಡಿದಳು ಮೋಹಿನಿ.

"ಸರಿ; ಯಾವಾಗಲಾದರೂ ಬಾ" ಎನ್ನುತ್ತ ಸರಸರ ಹೊರಟೇ ಹೋದಳು.

ರಘು ಕೇಕು ಬಿಸ್ಕತ್ತುಗಳನ್ನು ತಾನೇ ತೆಗೆದುಕೊಂಡುಹೋಗಿದ್ದ. ಕಾರು ಹೊರಟಾಗ ಇಬ್ಬರೂ ಇತ್ತ ಕಣ್ಣು ಹಾಯಿಸಲಿಲ್ಲ. ಖಿನ್ನ ಮನಸ್ಕಳಾದಳು ಮೋಹಿನಿ.

ಯಜಮಾನ ಕೇಳಿದ "ಅವರಾರು ಮೋಹಿನಿ'"

"ಅಣ್ಣ–ಅತ್ತಿಗೆ. ಹೀಗಿದೆ ನಮ್ಮ ಪ್ರಪಂಚ."

"ನಿಜವಾಗಿ....? ಅವರು ಆಗಾಗ ಹೀಗೆ ಬರುವುದುಂಟು."

"ಹೌದಾ ಸ್ವಾಮೀ. ನಂಬಿದರೆ ನಂಬಿ. ಬಿಟ್ಟರೆ ಬಿಡಿ. ನನ್ನನ್ನು ನರಕಕ್ಕೆ ನೂಕಿದವರು ಇವರೇ. ಇಂದಿನ ಭೇಟಿ ಅನಿರೀಕ್ಷಿತ."

"ನೀನು ಅವರಲ್ಲಿಗೇ ಹೋಗಿ ಬರುವುದಿಲ್ಲವೇ?"

"ಇಲ್ಲ, ನನ್ನ ಕತೆ ಕೇಳಿದರೆ ಕಲ್ಲೂ ಕರಗುತ್ತೆ. ಅಕ್ಕ ತಂಗಿಯರಿಬ್ಬರು ಚಿಕ್ಕಂದಿನಲ್ಲಿಯೇ ಮರಣಹೊಂದಿದರು. ದೇವರು ನನ್ನನ್ನು ಈ ನರಕಕ್ಕೆಂದೇ ಉಳಿಸಿದನೇನೋ. ಅಣ್ಣ ಒಬ್ಬನೇ. ಅಪ್ಪ ಇರುವಾಗ ಅಂಗಡಿ ವ್ಯಾಪರ ಅಷ್ಟಕ್ಕಷ್ಟೆ. ಇವನು ಗಿರಾಕಿಗಳ ತಲೆಬೋಳಿಸುವುದರಲ್ಲಿ ನಿಸ್ಸೀಮ. ವ್ಯಾಪಾರ ಕುದುರಿಸಿಕೊಂಡು ಹೊಸ ಮನೆ ಕಾರು; ಮಜವೇ ಮಜ. ನಾನು–ಒಬ್ಬಳೇ ತಂಗಿ. ನನ್ನ ಸಂಕಟ ಕೇಳುವವರಿಲ್ಲ. ಅವನು ಹೈಸ್ಕೂಲು ಹತ್ತಿದ್ದಷ್ಟೆ. ವಿದ್ಯೆ ಹತ್ತದೆ ಶಾಲೆ ಬಿಟ್ಟ. ನಾನು ತಂದೆ ಇರುವಾಗ ಕಾಲೇಜು ಹತ್ತಿದೆ. ಅವರು ತೀರಿಕೊಂಡದ್ದೇ ತಡ ನನ್ನ ವಿದ್ಯೆಗೆ ಎಳ್ಳು ನೀರು ಬಿಡಿಸಿದ ಮಹರಾಯ. ತಂದೆ ತೀರಿಕೊಂಡ ತಿಂಗಳಲ್ಲೇ ತಾಯಿ ಎದೆಯೊಡೆದು

ಸತ್ತರು. ಅನಂತರ ನಾನು ಅನಾಥೆ! ಅಣ್ಣ ಅತ್ತಿಗೆಯರ ಆಟಕ್ಕೆ ನಾನೊಂದು ಚೆಂಡು! ಆ ಕಡೆಯೂ ಒದೆತ. ಈ ಕಡೆಯೂ ಒದೆತ. ಅಮ್ಮನ ಹರಕಲು ಸೀರೆ ಹೊರತು ನನಗೆ ಇನ್ನೇನೂ ದಕ್ಕಲಿಲ್ಲ. ನನ್ನ ಸೋದರತ್ತೆಯ ಮಗ ಕಲಿಕತ್ತೆಯಲ್ಲಿ ಓದುತಿದ್ದ. ಅವನ ಓದು ಇನ್ನೂ ಎರಡು ವರ್ಷವಿತ್ತು. ನಾವಿಬ್ಬರೂ ದಂಪತಿಗಳಾಗುವ ಇಚ್ಛೆಯಿಂದ ಪರಸ್ಪರ ಪ್ರೀತಿಸುತಿದ್ದೆವು. ಅವನು ಬಂದರೆ ಇವಳ ಬದುಕು ಬಂಗಾರವಾಗುತ್ತೆ ಎಂದು, ನಾನು ಎಷ್ಟೆಷ್ಟು ಪೇಚಾಡಿದರೂ ಬಿಡದೆ, ಅವನು ಬಂಗಾಲಿಯನ್ನು ಮದುವೆಯಾಗಿದ್ದಾನೆಂದು ಸುಳ್ಳು ಹೇಳಿ ನನ್ನನ್ನು ಗೋಪುವಿನೊಂದಿಗೆ ಮದುವೆಮಾಡಿಸಿಬಿಟ್ಟರು. ಅನಂತರ ನೀನು ಇದ್ದೀಯೋ ಸತ್ತಿದ್ದೀಯೋ ಎಂದು ವಿಚಾರಿಸಲಿಲ್ಲ. ಮದುವೆಗೆ ಹತ್ತು ಮಂದಿಗೆ ಊಟವಷ್ಟೆ. ನಮ್ಮ ಒಡವೆ ಸೀರೆ ಕೊಡಿ ಎಂದು ಕೇಳಿದುದಕ್ಕೆ 'ನಿನಗೆ ಇಷ್ಟು ದಿನ ಊಟ ಹಾಕಲಿಲ್ಲವೇ' ಎಂದು ಕೇಳಿದರು. ಅಲ್ಲಿಗೆ ಮುಗಿಯಿತು, ಹೇಳಿ ಕೇಳುವ ಪ್ರಸ್ತಾಪ.

ಅಣ್ಣನ ಮಕ್ಕಳು ಚಿಕ್ಕವರಿರುವಾಗ ಎತ್ತಿ ಆಡಿಸಿದವಳು ನಾನೇ. ಅವರ ಮೇಲೆ ನನಗೆ ತುಂಬಾ ಪ್ರೀತಿ. ಅವರಿಗೂ ಅಷ್ಟೆ. ಈಗ ಅವರೆಲ್ಲೋ ನಾನೆಲ್ಲೋ. ಅಲ್ಲಿಗೆ ಮುಗಿಯಿತು ನಮ್ಮ ನಮ್ಮ ಸಂಬಂಧ. ನಾನು ಮೂರು ಮಕ್ಕಳನ್ನು ಹೆತ್ತೆ. ಕಾಲೇಜು ಓದಿ ನನ್ನ ಗತಿ ಹೀಗಿದೆ. ನಾನು ಉಪಾಧ್ಯಾಯಿನಿಯಾಗುವ ಇಚ್ಛೆ ಹೊಂದಿದ್ದೆ. ಎಲ್ಲಾ ಮಣ್ಣುಗೂಡಿತು. ಹೋಗಲಿ ಎಂದರೆ, ಗೋಪು ಸರಿ ಇದ್ದಾನೆಯೇ? ಈ ಸಂಸಾರವೊಂದು ನರಕ..."

ಮಾತು ಮುಗಿಯುವುದಕೊಳಗಾಗಿ ಕಣ್ಣುಗಳಲ್ಲಿ ನೀರು ಇಳಿದು ಹೋಯಿತು.

ಯಜಮಾನನ ಹೃದಯ ಬಿಸಿಲಟ್ಟದ ಮಂಜಿನಂತಾಯಿತು.

"ಮೋಹಿನಿ, ನೀನು ಕಾಲೇಜು ಓದಿದವಳು ಎಂಬುದು ತಿಳಿದಿರಲಿಲ್ಲ. ನೀನಾದರೂ ಹೇಳಬಹುದಿತ್ತು. ಹೋಗಲಿ, ಇನ್ನು ಮುಂದೆ ನೀನು ಪಾತ್ರೆ ಉಜ್ಜಬೇಡ ಉಸ್ತುವಾರಿ ನೋಡಿಕೊ. ನಿನಗೆ ಇನ್ನೂ ನೂರು ರೂಪಾಯಿ ಕೊಡುವೆ. ನೋಡೋಣ, ಮುಂದೆ ಎಂದಾದರೂ ಸಹಾಯ ಮಾಡಲಾಗುತ್ತೋ, ನೋಡಿ ಮಾಡುವೆ. ಅಂತೂ, ನಿನ್ನ ಜೀವನ ತುಂಬಾ ವಿಷಾದಕರ. ಇಷ್ಟೆ

ಎಂದುಕೊಳ್ಳಬೇಡ. ಈ ಸಮಾಜದಲ್ಲಿ ಮನೆ ಮನೆಯೂ ಹೀಗೆಯೇ ಒಂದಲ್ಲ ಒಂದು ಸಂಕಟದಿಂದ ನರುಳುವುದೇ ಆಗಿದೆ. ಆದ್ದರಿಂದ ಅದನ್ನೇ ಮನಸ್ಸಿಗೆ ಹಚ್ಚಿಕೊಂಡು ದೇಹಾರೋಗ್ಯಕ್ಕೆ ಕುಂದು ತಂದುಕೊಳ್ಳಬೇಡ. ಮಕ್ಕಳಿಗೆ ತಂದೆಗಿಂತಲೂ ತಾಯಿಯ ಆಗತ್ಯ ಹೆಚ್ಚು. ನೀನದನ್ನು ಅರಿತುಕೊಂಡಿರಬಹುದು. ಎಷ್ಟೇ ಕಷ್ಟ ಬಂದರೂ ಜೀವಕ್ಕೆ ಹಾನಿ ತಂದುಕೊಳ್ಳಬಾರದು. ಮೃದು ಮನದ ಗೃಹಿಣಿಯರು ಈ ಜಗತ್ತಿನಿಂದಲೇ ದೂರವಾಗುವುದನ್ನು ನಾವು ದಿನೇ ದಿನೇ ಕೇಳುತಿದ್ದೇವೆ. ನಾವು ಹೇಗೂ ಇತರರನ್ನೂ ಸರಿಪಡಿಸಲಾರೆವು. ನಮ್ಮನ್ನು ನಾವು ಪ್ರಯತ್ನ ಪೂರ್ವಕವಾಗಿ ಸರಿಪಡಿಸಿಕೊಳ್ಳಬಹುದು. ಆದ್ದರಿಂದ ಇತರರ ದುಂಡಾವೃತ್ತಿಗೆ ನಾವು ಹೊಣೆಯಲ್ಲ. ಅವರವರು ತಪ್ಪನ್ನು ಅರಿತುಕೊಂಡಾಗ ದಾರಿಗೆ ಬಂದಾರು, ಬರದಿದ್ದರೆ ತಪ್ಪು ಅಥವಾ ಹೊಣೆ ಅವರದೇ...."

ಅವರು ಇನ್ನೂ ಏನೇನು ಹೇಳಿದರೋ ಅವಳು ಎಷ್ಟೆಷ್ಟು ಕೇಳಿದಳೋ ...ಅಂತೂ, ಉಪದೇಶ ಕೊನೆಗೊಂಡಾಗ ಮೋಹಿನಿಯ ಮನದಲ್ಲಿ ಹೊಸ ಬೆಳಕು ಮೂಡಿತ್ತು. ಅವಳು ವಿನಯದಿಂದ ನಮಸ್ಕರಿಸಿ ಮನೆಗೆ ಹೊರಟಳು.

ಮನೆಯಲ್ಲಿ ಕೈ ಕೆಲಸ ಮಾಡುತಿದ್ದರೂ ಮನದಲ್ಲಿ ಅಣ್ಣ ಅತ್ತಿಗೆಯ ಚಿತ್ರವೇ. ಅವರ ವೈಭವೋಪೇತ ಜೀವನ ದೈವಾಯತ್ತವೇ ಆಗಿರಬಹುದು. ಯಾರಿಗೆ ಗೊತ್ತು ಎಂದುಕೊಂಡು ಮನಸ್ಸಿನಿಂದ ತಳ್ಳಿಹಾಕಲು ಪ್ರಯತ್ನಿಸಿದರೂ ಪುನಃ ಪುನಃ ಚಿತ್ತಭಿತ್ತಿಯಲ್ಲಿ ಸುಳಿಸುಳಿಸುಳಿಯುತ್ತಲೇ ಇರುತ್ತದೆ. ಅದೇ ನೇರಕ್ಕೆ ಬೇಕರಿಯ ಯಜಮಾನ ಕರುಣೆಯೇ ಮೂರ್ತಿಯೆತ್ತಿ ಬಂದಂತೆ ತನಗೆ ನೀಡಿದ ಉಪದೇಶವೂ ಮನೋಗತ. ಅವರೆಲ್ಲಿ? ಇವರೆಲ್ಲಿ? ಓಹ್! ಉತ್ತರ ಧೃವ-ದಕ್ಷಿಣ ಧೃವಗಳ ಅಂತರ. ಎರಡೂ ಚಿತ್ರಗಳನ್ನು ಒಂದೇ ಗಳಿಗೆಯಲ್ಲಿ ಕಂಡೆ....ಹಾಯ್? ಜಗದೀಶ್ವರ! ನೀನು ಎಂಥ ಆಟಗಾರ!

ನೀನಾ-ಮೀನಾ ಅಜ್ಜಿಯೊಡನೆ ಒಳ ಬಂದು "ರೊಟ್ಟಿ ಕೊಡಮ್ಮಾ" ಎಂದರು.

"ನೀನು ಬೇಕರಿಗೆ ಸೇರಿಕೊಂಡನಂತರ ಮಕ್ಕಳು ಎಷ್ಟೋ ಪುಷ್ಟಿಗೊಂಡಿದ್ದಾರೆ!"

ಅಜ್ಜಿಯ ಮಾತಿಗೆ 'ಹೌದು' ಎಂಬಂತೆ ತಲೆಯಾಡಿಸಿದಳು ಮೋಹಿನಿ. ಮುಖಬಿಂಬ ನಸು ಮಾತ್ರವೇ ಅರಳಿ ಅನಂತರ ಹಾಗೇ ಮುದುಡಿಕೊಂಡಿತು.

೬

ನಾಸ್ತಿ ಕಾಮಸಮೋ ವ್ಯಾಧಿರ್ನಾಸ್ತಿ
ಮೋಹಸಮೋ ರಿಪುಃ ।

ಗೋಪುವಿನ ದುಶ್ಚಟಗಳು ದಿನೇ ದಿನೇ ಹೆಚ್ಚುತ್ತಲೇ ಇದ್ದುವು. ಮನೆಗೆ ಮರಳಿದಾಗ ಕುಡಿದ ಹಣ್ಣಾಗಿ ಬರುತಿದ್ದ. ಆಫೀಸಿನಿಂದ ಮೋಹನಿ ಇನ್ನೂರು ರೂಪಾಯಿಗಳನ್ನು ತೆಗೆದುಕೊಂಡುದುದು ತಿಳಿದು ಬಂದಾಗ ಕಿಡಿ ಕಿಡಿಯಾದ. ಮನೆಗೆ ಬಂದವನೇ ತೊದಲುತ್ತ "ಮೋಹ್ನೀ!" ಎಂದ.

ಮೋಹಿನಿ ಹೊರ ಬಂದಳು. ಆ ದೃಶ್ಯ ಅವಳನ್ನು ವಿವಶಗಳನ್ನಾಗಿ ಮಾಡಿತು. ತಲೆಗೂದಲು ಅಸ್ತವ್ಯಸ್ತ, ಕಣ್ಣುಗಳು ಕೆಂಪು ಕೆಂಪಾಗಿವೆ. ನಾಲಿಗೆಯೂ ಸ್ಥಿರವಿಲ್ಲ, ಕಾಲುಗಳು ತೊಡರುತ್ತಿವೆ, ಮಿತಿಮೀರಿ ಕುಡಿದ ಅಮಲನ್ನು ಅರಿತೊಡನೆಯೇ ಒಂದು ಹೆಜ್ಜೆ ಹಿಮ್ಮೆಟ್ಟಿದಳು ಅವಳು. ಆದರೆ, ಗೋಪು ಅತ್ಯಂತ ಅಸಹನೆಯಿಂದ ಮುಂದುವರಿದು "ನೀನು ಆಫೀಸಿಗೆ ಹೋಗಿ ಇನ್ನೂರು ರೂಪಾಯಿ ತಂದೆಯಾ? ಯಾರನ್ನು ಕೇಳಿತಂದೆ??"

"ಮಕ್ಕಳಿಗಾಗಿ ತಂದೆ....ಕೇಳುವುದಕ್ಕೆ ನೀನಿರಲಿಲ್ಲವಲ್ಲಾ?"

ಆ ಸಹಜ ಪ್ರತಿಯುತ್ತರನ್ನು ಸಹಿಸಲಿಲ್ಲ, ಗೋಪು, ಫಳಾರನೆ ಕೆನ್ನೆಯ ಮೇಲೆ ಬಿಗಿದ. ಅವಳು ತಪ್ಪಿಸಿಕೊಳ್ಳಲು ಅಡಿಗೆ ಮನೆಗೆ ನುಗ್ಗಿದರೂ ಬಿಡದೆ ಬೆನ್ನಿನ ಮೇಲೆ ಗುದ್ದಿದ. ಮೂವರು ಮಕ್ಕಳೂ ಅತ್ತು ಜೋರಾಗಿ ಗೋಳಿಟ್ಟುವು.

ಅವನಿಗೆ ಎಂದುರು ನಿಂತರೆ ಇನ್ನಷ್ಟು ರೊಚ್ಚಿಗೇಳುವನೆಂಬುದು ತಿಳಿದಿದ್ದ ಮೋಹಿನಿ ಬಾಗಿಲ ಮರೆಯಲ್ಲಿ ಅಡಗಿಕೊಂಡು ಮುಸಿಮುಸಿ ಅತ್ತಳು.

ಮನೆಯೆಲ್ಲಾ ರಣಗೋಳಾಯಿತು. ಮಾಡಿದ್ದ ಅಡಿಗೆ ಹಾಗೇ ಉಳಿಯಿತು. ಗೋಪು ಪಚ ಪಚ ಹತ್ತಾರು ಮಾತಾಡುತ್ತ ಹೋಗಿ ಹಾಸಿಗೆಯ ಮೇಲೆ ಬಿದ್ದುಕೊಂಡ. ಕಾಲಿನಲ್ಲಿ ಬೂಟುಗಳು, ಮೈಯಲ್ಲಿ ಕಾಕಿಯುಡುಪು ಹಾಗೆ ಉಳಿದಿತ್ತು. ಅದರ ಪರಿವೆಯೇ ಇಲ್ಲ. ಮಲಗಿದ ಸ್ವಲ್ಪ ಹೊತ್ತಿನಲ್ಲಿಯೇ ಚೆನ್ನಾದ ನಿದ್ದೆ. ಒಂದು ಗಂಟೆಯ ಸುಖನಿದ್ದೆಯಲ್ಲಿ ಅಮಲು ಇಳಿಯಿತು.

ಹೊಟ್ಟೆಯಲ್ಲಿ ಹಸಿವು, ವಿಪರೀತ ದಾಹ. ಸ್ವಲ್ಪ ಹೊತ್ತು ಹಾಗೇ ಬಿದ್ದುಕೊಂಡಿದ್ದ. ಅನಂತರ ತಾಳಲಾಗದೆ ಎದ್ದು ಬಚ್ಚಲಿಗೆ ಹೋಗಿ ಮುಖ ಮಜ್ಜನ ಮಾಡಿ ಅಡಿಗೆ ಮನೆಗೆ ಹೋದ.

ಪಾತ್ರೆಯಲ್ಲಿ ಖಾದ್ಯ–ಅನ್ನ ಹಾಗೆಯೇ ಉಳಿದಿತ್ತು. ಮಕ್ಕಳೂ ಉಂಡಿಲ್ಲ. ತಾನೇ ತಟ್ಟೆ ತೆಗೆದುಕೊಂಡು ಹೊಟ್ಟೆತುಂಬ ಉಂಡು ಮಲಗಿದ.... ಮೋಹಿನಿಯ ತಪ್ಪೇನೂ ಇಲ್ಲ. ನಾನು ದುಡುಕಿದೆ ಎಂಬುದು ತಿಳಿ ಮನಸ್ಸಿಗೆ ತಿಳಿಯಿತು. ಆದರೂ, ಕೊನೆಗಾಣದ ಬಿಗುಮಾನ.

ಮೋಹಿನಿ ಮಕ್ಕಳೊಂದಿಗೆ ಮಕ್ಕಳ ಕೋಣೆಯಲ್ಲೇ ಮಲಗಿದ್ದಾಳೆ. ಅವಳ ಜೀವನದಲ್ಲಿ ಇದೇ ಮೊದಲ ಪ್ರಸಂಗವಲ್ಲ. ಇಂಥ ಪ್ರಕರಣಗಳೂ ಎಷ್ಟೋ ಆಗಿ ಹೋಗಿವೆ. ಎಷ್ಟೋ ಬಾರಿ ವಾರಗಟ್ಟಲೆ–ತಿಂಗಳು ಗಟ್ಟಲೆ ಅವನಿಂದ ದೂರವಿದ್ದುದೂ ಉಂಟು.

ಆದರೇನು?

ಜೀವನ ಬಂಧ ಒಂದಲ್ಲ ಒಂದು ರೀತಿಯಲ್ಲಿ ಕೈ ಚಾಚಿ ಕರೆಯುತ್ತದೆ. ಬೇಡವೆಂದರೂ ಮಣಿಯಲೇಬೇಕು. ಆದರೂ, ಒಮ್ಮೊಮ್ಮೆ ಗಂಡಿನಾಶ್ರಯ ವಿಲ್ಲದೆ ಬದುಕಲಾರೆನೇ? ಎಂಬ ಪ್ರಶ್ನೆ ಏಳುತ್ತಲೇ ಇರುತ್ತದೆ.

ಈ ಬಗೆಯ ಜೀವನ ಬೇಡವೇ ಬೇಡ ಎಂದು ಚೀರುತ್ತದೆ ಆತ್ಮ.

* * *

ಇಂದು ಭಾನುವಾರ. ಒಂದುವಾರದ ಕೆಲಸವೆಲ್ಲಾ ಕೈಬೀಸಿ ಕರೆಯುತ್ತಿದೆ. ಎಷ್ಟು ಮಾಡಿದರೂ ಮುಗಿಯದ ಕೆಲಸ. ಬುಗುರಿಯಂತೆ ಓಡಾಡಿ ಕೆಲಸ ಮುಗಿಸಿದಾಗಲೇ ಬಾಲ್ಯಗೆಳತಿ ಕಮಲಾ ಆಗಮಿಸಿದಳು. ಅವಳನ್ನು ನೋಡುತ್ತಲೂ ಆತ್ಮಾದರದಿಂದ ಬರಮಾಡಿಕೊಂಡ ಮೋಹಿನಿ ಮಗ್ಗುಲಲ್ಲಿ ಕೂಡಿಸಿಕೊಂಡು "ನಿನ್ನ ಮುಖ ನೋಡಿ ಎಷ್ಟು ದಿನವಾಗಿತ್ತು ಕಮೂ?" ಎಂದಳು ಭುಜದ ಮೇಲೆ ಕೈ ಹಾಕಿ; ಸ್ನೇಹಭಾವದಿಂದ ಮುಖಬಿಂಬ ಅರಳಿ ಹೂವಾಯಿತು.

ಆದರೆ, ಆ ಆನಂದದ ಹಿಂದೆ ಎಷ್ಟೆಷ್ಟು ನೋವುಗಳು ಇದ್ದುವೋ ....ಜಾಹೀರಾತಿಗೆ ಬೀರುವಂತೆ ಆ ನಗೆಯನ್ನು ಕಂಡಾಗಲೇ ಅರ್ಥೈಸಿಕೊಂಡಳು ಕಮಲಾ.

"ನನಗೂ ಬಿಡುವಿಲ್ಲ; ನೀನಂತೂ ಬರಲಿಲ್ಲ. ನಾನಾದರೂ ನೋಡಿ ಹೋಗುವ ಎಂದೇ ಬಂದೆ."

"ತುಂಬ ಥ್ಯಾಂಕ್ಸ್?" ಎಂದ ಮೇಹಿನಿ ಪುನಃ "ನಿನ್ನನ್ನು ಅನೇಕ ಬಾರಿ ನೆನಸಿಕೊಂಡಿದ್ದೆ. ನೀನೇ ಬಂದುದು ಒಳ್ಳೆಯದಾಯಿತು. ಇಲ್ಲವಾಗಿದ್ದರೆ ಪರಸ್ಪರ ಭೇಟಿ ಸಧ್ಯಕ್ಕಾಗುತ್ತಿರಲಿಲ್ಲ.

"ನೀನಾ-ಮೀನರನ್ನು ಶಾಲೆಗೆ ಹಾಕಿದ್ದೀಯಾ?"

"ಹಾಕಬೇಕಿತ್ತು. ಬೆಳವಣಿಗೆ ಕ್ಷೀಣಿತವಾದುದರಿಂದ ಯೋಚನೆ ಮಾಡಲಿಲ್ಲ. ಈ ದಿನಗಳಲ್ಲಿ ಎಷ್ಟೋ ಚೇತರಿಸಿಕೊಂಡಿದ್ದಾರೆ. ನನಗೆ ಒಂದು ಬಾಲವಾಡಿ ನಡೆಸಬೇಕೆಂಬ ಆಸೆ, ನಾನಿರುವ ಸ್ಥಿತಿಯಲ್ಲಿ ಕೈಗೂಡುವುದು ಕಷ್ಟ. ಆರ್ಥಿಕ ದುಸ್ಥಿತಿಯಿಂದ ನಾನು ಬೇಕರಿಯಲ್ಲಿ ಕೆಲಸಕ್ಕೆ ಸೇರಿರುವೆ ಸಮಯದ ಉಳಿತಾಯವೂ ಬಹಳ ಕಷ್ಟ."

"ನಿನ್ನ ಸ್ಥಿತಿಗತಿ ನೋಡಿದರೆ ಹೀಗೆ. ಅಲ್ಲಿ ನಿನ್ನ ಅಣ್ಣ-ಅತ್ತಿಗೆ ಮಜವಾಗಿದ್ದಾರೆ. ಮೊದಲೆಲ್ಲಾ ಹಳೆ ಮನೆಯನ್ನು ಕಿತ್ತು ಹೊಸ ಮಾದರಿ ಮಾಡಿಕೊಂಡರು. ಈಗ ನೋಡಿದರೆ ಪಕ್ಕದ ಸ್ಥಳವನ್ನು ಕೊಂಡುಕೊಂಡು ನವೀನ ಮಾದರಿಯ ಮನೆ ಕಟ್ಟುತಿದ್ದಾರೆ. ನಿಮ್ಮ ತಂದೆ ಇರುವಾಗ ಹೇಗೆ ಹೇಗೋ ಇದ್ದರು. ಇವರಂತೂ ಸ್ವರ್ಗಕ್ಕೇರುತ್ತಿದ್ದಾರೆ."

"ಏಣಿಯಿದ್ದರೆ ಏರುವುದೇನು ಕಷ್ಟ?"

"ಏಣಿ ಹಾಕಿಕೊಂಡದ್ದು ಕೂಡ ಅವರೇ."

"ನಿಜ. ಅದೃಷ್ಟವಂತರು. ಮೊನ್ನೆ ಅನಿರೀಕ್ಷಿತವಾಗಿ ಅವರ ಭೇಟಿಯಾಯಿತು. ನಮ್ಮ ಬೇಕರಿಯಲ್ಲಿ. ಅತ್ತಿಗೆಯ ಮೈಯೆಲ್ಲಾ ಜಗಜಗ. ಇಬ್ಬರೂ ಚೆನ್ನಾಗಿ ಮೈಬೆಳೆಸಿದ್ದಾರೆ. ಒಂದು ಕ್ಷಣ ನನ್ನ ಕಣ್ಣುಗಳನ್ನೇ ನಂಬದಂತಾದರೂ ನಾನು ತೋರ್ಪಡಿಸಿಕೊಳ್ಳಲಿಲ್ಲ. ಔಪಚಾರಿಕವಾಗಿ ಅಥವಾ ಕಾಟಾಚಾರಕ್ಕಾಗಿ ಒಂದೆರಡು ಮಾತುಕತೆಗಳಾದುವು. ಅವರು ಪಾರ್ಟಿಯ ಉದ್ದಿಶ್ಯ ಬುಟ್ಟಿಗಟ್ಟಲೆ ಕೇಕು ಬಿಸ್ಕತ್ತು ಕೊಂಡುಕೊಂಡರು. ಅಂತೂ ದಿವ್ಯದರ್ಶನ!"

"ಅವರು ಹಾಗಿದ್ದಾರಲ್ಲ, ನಿನಗೊಂದಿಷ್ಟು ಸಹಾಯ ಮಾಡಬಾರದೇ? ಅವರ ಹಳೆಯ ಮನೆ ನಿನಗೆ ಬಿಟ್ಟುಕೊಡಬಹುದು. ನೀವಿಬ್ಬರೇ ಮಕ್ಕಳು.

ನಿನಗೆ ಸಮಪಾಲು ಬರಬೇಡವೇ? ನೀನು ಕೇಳದಿರುವುದರಿಂದ ಅವರಿಗೆ ಲಾಭವೇ!"

"ಅಯ್ಯೊ, ಕಮಲಾ! ನನ್ನ ಮತ್ತು ಅಮ್ಮನ ಸಣ್ಣ ಪುಟ್ಟ ಒಡವೆಗಳನ್ನೇ ಕಿತ್ತುಕೊಂಡರು! ಇನ್ನು ಮನೆ ಕೊಡುವುದುಂಟೇ? ಒಂದು ಹಿಡಿ ಮಣ್ಣೂ ಕೂಡ ದಕ್ಕದು ನನಗೆ."

"ಅದು ನನಗೂ ಗೊತ್ತು. ಕೇಳುವ ರೀತಿಯಲ್ಲಿ ಕೇಳು. ಕೋರ್ಟು–ಕಾನೂನು ಪೂರ್ಣ ಸತ್ತಿಲ್ಲವಲ್ಲಾ?"

"ಅಯ್ಯೊ, ಬಿಡು. ನಮಗೇಕೆ ಈ ರಗಳೆ? ನಾನೇನೂ ಇಲ್ಲಿ ಶಾಶ್ವತವಲ್ಲವಲ್ಲ, ಇದ್ದಷ್ಟು ದಿನ ಗಂಜಿ ಕುಡಿದರಾಯಿತು." ದನಿ ಎದೆಯಾಳದಿಂದ ಹರಿದು ಬಂತು.

"ನಿನ್ನ ಸಾತ್ವಿಕ ಭಾವ ನನಗೆ ಮೊದಲಿಂದಲೂ ಗೊತ್ತು. ಆದರೂ, ನಿನ್ನ ಜೀವನ ಸುಖಕ್ಕಾದರೂ ಅಲ್ಪಸ್ವಲ್ಪ ಪಡೆದಿದ್ದರೆ ಒಳ್ಳೆಯದಿತ್ತು. ಹೋಗಲಿ, ಗೋಪು ದುಡಿಮೆ ಪೂರಾ ಸದ್ವಿನಿಯೋಗವಾಗುವಂತಿದ್ದರೆ ಪರವಾಯಿರಲಿಲ್ಲ. ನಿನಗೆ ಅತ್ತಲೂ ಇಲ್ಲ, ಇತ್ತಲೂ ಇಲ್ಲ, ತ್ರಿಶಂಕು ಸ್ವರ್ಗ."

"ಹೋಗಲಿ ಬಿಡು, ಅಷ್ಟಾದರೂ ಇದೆಯಲ್ಲ,"

ಸಕ್ಕೂ ತಲೆ ಬಾಚಿಕೊಳ್ಳುತ್ತ "ಕಮಲಕ್ಕ, ವಿದೇಶೀಯರ ಪ್ರಭಾವದಿಂದ ನಮ್ಮವರು ಈಗೀಗ ಕಣ್ತೆರೆಯುತಿದ್ದಾರೆ. ವಾದವಿವಾದಗಳು ಹುಟ್ಟಿಕೊಂಡಿವೆ. ಆದರೆ, ನೀವೇನೇ ಅನ್ನಿ; ಎಷ್ಟೇ ಪ್ರಭಾವಿತರಾಗಿರಿ ಸ್ತ್ರೀ ಸ್ವಾತಂತ್ರ್ಯಯಜ್ಞದಲ್ಲಿ 'ಸಮಿತ್ತು–ಹವಿಸ್ಸು' ಸ್ತ್ರೀಯಲ್ಲದೆ ಮತ್ತಾರು ಆಗಬಲ್ಲರು ಹೇಳಿ? ನಾವು ಆರಂಭಿಸಿದ ಯಜ್ಞದ ಅಧ್ಯಾಯ ಮುಗಿಯುವುದರೊಳಗೆ ನಾವೇ ಇರುವುದಿಲ್ಲವೇನೋ. ಇಂತಹ ಶೋಚನೀಯ ಸ್ಥಿತಿ ಇರುವುದರಿಂದ ಹೆಜ್ಜೆ ಮುಂದಿಡಬೇಕೋ ಹಿಂದಿಡಬೇಕೋ ಅರ್ಥವಾಗುವುದಿಲ್ಲ. ಆದರೂ, ನನಗನಿಸುವುದೇನೆಂದರೆ ಒಂದುವೇಳೆ ಕಾನೂನಿನ ಬಲ ಕಡತದಲ್ಲಿದ್ದರೂ ನಮಗೆ ಎಂದೆಂದಿಗೂ ಸಾಮಾಜಿಕ ಬಲ(ಹಿಂದೂಸ್ಥಾನದಲ್ಲಿ) ಬರುವುದಿಲ್ಲ. ಇದಕ್ಕೇ ನೀವೇನಂತೀರಿ?"

"ನೀನು ಯಾವ ಪ್ರಮಾಣದ ಮೇಲೆ ಹೇಳುತ್ತಿ?"

"ನಾವಿರುವುದು ಪೋಲೀಸ್ ಕ್ವಾರ್ಟರ್ಸ್‌ನಲ್ಲಿ. ಈ ತೀರಾ

ಸಣ್ಣವಲಯವನ್ನು ನಾವು ಎಂದೆಂದಿಗೂ ಮಾರ್ಪಡಿಸಿ ನಾಗರಿಕ ವಲಯಕ್ಕೆ ತರಲಾರೆವು ಎಲ್ಲರ ಅಭಿಪ್ರಾಯವೂ ಅವರವರ ನೇರಕ್ಕೇ ಹೊರತು ಬೇರಿಲ್ಲ.

"ಕಮಲೂ! ಜಡ ಭಾರತ....ತುಂಬಿರುವುದು ಸ್ವಾರ್ಥದಿಂದ. ಈ ಸ್ವಾರ್ಥದ ಪರಮಾವಧಿಯನ್ನು ದಾಟುವುದು ಸಾಧ್ಯವೇ ಇಲ್ಲ. ನಾವಿರುವುದು ಜಡ ಭಾರತದಲ್ಲಿ. ಆದ್ದರಿಂದ ಪರಿಸ್ಥಿತಿಗೆ ಹೊಂದಿಕೊಳ್ಳುವುದೇ ಉತ್ತಮ," ಎಂದಳು ಮೋಹಿನಿ ಕಮಲಳ ಕೈಯನ್ನು ಅದುಮಿ ಹಿಡಿದುಕೊಂಡು; ಮುಖ ಬಿಂಬ ಮಳೆ ಬಿಸಿಲಾಯಿತು.

"ನೋಡು! ಯಾರ‍್ಯಾರು ಏನೇನು ಮಾಡಿದ್ದಾರೋ ಅದನ್ನು ಅವರು ತಾನೇ ಉಣ್ಣಬೇಕು? ಒಂದಲ್ಲ ಒಂದು ದಿನ...ಅಲ್ಲಿಂದ ಮಾತು ಮುಂದುವರಿಸಲಾಗದೆ ಸುಮ್ಮನಾದಳು.

"ಬಿಡು, ನಮಗೇಕೆ ಆ ವಿಚಾರ? ಅವರುಂಟು; ಅವರ ಕರ್ಮವುಂಟು."

ನೀನಾ-ಮೀನಾ ತಾಯಿಯ ಮೈಮೇಲೆ ಹತ್ತಿ ಕುಳಿತು "ಅಮ್ಮಾ ಹಸಿವು." ಎಂದರು.

"ಆಟ ಆಡಿ ಸುಸ್ತಾಯಿತೇ?"

"ಹೌದಮ್ಮಾ...."

"ಊಟಕ್ಕೆ ಇನ್ನೂ ಸಮಯವಿದೆ. ಈಗಲೇ ಏನವಸರ?"

"ಹಾಗಾದರೆ ಬ್ರೆಡ್ಡು ತಿನ್ನೋಣವೇ?"

"ಕೈ ತೊಳೆದು ತಿನ್ನಿ"

ಇಬ್ಬರೂ ಅಡಿಗೆ ಮನೆಗೆ ಓಡಿದರು. ಸಕ್ಕೂ ಅವರಿಗೆ ಸಹಾಯಕಳಾಗಿ ಹಿಂದೆಯೇ ಹೋದಳು.

"ಸಂತೋಷಪುರದಲ್ಲಿ ಸಂತೋಷವೇ ಇಲ್ಲದಿರುವಂತೆ ಈ ಸಂಸಾರದಲ್ಲಿ ಸಂತೋಷ ಇಲ್ಲವಾಗಿದೆ. ಈಗೇನೋ ಮಕ್ಕಳು ಬೆಳೆಯುತ್ತಿರುವುದರಿಂದ ಹೆಚ್ಚಿನ ಕಷ್ಟವಿಲ್ಲ. ಇನ್ನಾದರೂ ಹಾಯಾಗಿರೋಣವೆಂದರೆ ಗೋಪು ಕತೆಗೊತ್ತಿದೆಯಲ್ಲ. ಸಂಸಾರದ ಮೇಲೆ ಲವಲೇಶವೂ ಶ್ರದ್ಧೆಯಿಲ್ಲ. ನೂರಿನ್ನೂರು ರೂಪಾಯಿ ಎಸೆದು ಬಿಟ್ಟಾರಾಯಿತು. ಗಳಿಕೆ ಎಲ್ಲಾ ಹಾಳು ಹವ್ಯಾಸಕ್ಕೆ ಮೀಸಲು. ಇಂಥ ಚಾರಿತ್ರ್ಯ ಹೀನನಿಂದ ವಂಶೋದ್ಧಾರ ಹೇಗಿರಬೇಡ? ನನಗೆ ಈ ಸಂಸಾರ ಬಿಟ್ಟು ಹೋಗುವ ಮನಸ್ಸು. ಬಾಲವಾಡಿ

ನೆಡೆಸುವುದಕ್ಕಾಗಿ. ಒಂದು ಸಣ್ಣ ಮನೆ ಸಿಕ್ಕಿದರೆ ಹೋಗಿ ಅಲ್ಲೇ ಇದ್ದು ಬಿಡೋಣ ಎನಿಸಿದೆ."

"ಗೋಪು ಬಿಟ್ಟಾನೆಯೇ?"

"ಅವನಿಂದ ತಪ್ಪಿಸಿಕೊಳ್ಳ ಬಲ್ಲೆ...ಅವನು ಕೊಡುವ ಚಿತ್ರಹಿಂಸೆ ಈ ಕಾಲೋನಿಯೆಲ್ಲಾ ಬಲ್ಲುದು."

"ನೀನು ಶಾಲೆ ತೆರೆಯವೆಯಾದರೆ ನಾನೂ ಸೇರಿಕೊಳ್ಳಬಲ್ಲೆ. ನಮ್ಮ ಶಾಲೆ ಬಿಡುವ ಯೋಚನೆಯಿದೆ ನನಗೆ. ನನಗೂ ಗತಿಯಿಲ್ಲ."

"ನೋಡೋಣ, ದೇವರ ದಯವಿದ್ದರೆ ಸಾಧ್ಯವಾಗುತ್ತೆ."

"ನಿನಗೆ ಶುಭ ಹಾರೈಸುವೆ!"

"ನಿನಗೂ ಶುಭ ಹಾರೈಸುವೆ!"

ಆಶಾಭಾವನೆ ಚಿಗುರಿತು.

೭

ಸುಮನಾ ನೆರೆ ಮನೆಯವಳಾದರೆ ಕಮಲಾ ನೆರೆ ಬೀದಿಯವಳು

ಅವರಿಬ್ಬರ ನೇಹಕ್ಕಾದರೂ ಆ ಹಾದಿ ತುಳಿಯವ ಮನಸ್ಸು. ಆದರೆ, ಅಣ್ಣ–ಅತ್ತಿಗೆ.....!ಆ ಒಂದು ಕಾರಣಕ್ಕಾಗಿ ಆ ಹಾದಿ ತುಳಿವ ಮನಸ್ಸಾಗದು. ಅಣ್ಣನ ಮಕ್ಕಳನ್ನಾದರೂ ಒಮ್ಮೆ ನೋಡಬೇಕು. ಈಗ ನನ್ನಷ್ಟೇ ಎತ್ತರ ಬೆಳೆದಿರಬಹುದು. ಆಗಣ ಸ್ನೇಹ ಮಮತೆ ಈಗೆಲ್ಲಿದ್ದೀತು? ಬಹುಶಃ ಈಗ ನನ್ನನ್ನು ಮರೆತಿರಲೂ ಬಹುದು...ಎಂದೆಲ್ಲಾ ಯೋಚನೆ ಬರುತ್ತದೆ ಕೂಡ. ಆದರೂ, ಆಗಿನ ಪ್ರೇಮಬಂಧ ಇಂದೂ ಮನದ ಕಿಂಡಿಯಲ್ಲಿ ಅವಿತುಕೊಂಡಿರುವುದು ದಿಟ. ಅಣ್ಣ ಅತ್ತಿಗೆ ಹೇಗಿದ್ದರೇನು? ನಾನು....? ಚಿತ್ತ ಭಿತ್ತಿಯಲ್ಲಿ ಪ್ರಶ್ನೆ ಮೂಡಿ ನಿಂತಿತು.

ಆಗೆಲ್ಲಾ ಗೆಳತಿಯರೊಡಗೂಡಿ ನಡೆಸುತಿದ್ದ ಆಟದ ಕೂಟ, ಓದಿನ ಕೂಟ ಎಷ್ಟು ಹೃದಯ ಸ್ಪರ್ಶಿ? ಅಕಾರಣವಾದ ಮಾತುಕತೆ, ಅಕಾರಣವಾದ

ನಗೆ, ಅಕಾರಣವಾದ ಭೇಟಿ. ಸೌಮನಸ್ಯ–ಸಂತಸಗಳ ಪರಮಾನ್ನವನ್ನು ಪ್ರತಿನಿತ್ಯವೂ ಉಂಡು ನಲಿಯುವ ಚೇತನ.....ಆ ಕಾಲವೆಲ್ಲಿ? ಈ ಕಾಲವೆಲ್ಲಿ?

ಮಾನಸಿಕ ವಿಶ್ಲೇಷಣೆ ಹೃದಯವನ್ನು ಗಾಣಕ್ಕೆ ಕೊಟ್ಟಿತ್ತು. ಮೋಹಿನಿ ಮಂಚದ ಮೇಲೆ ಅಡ್ಡಾಗಿ ಮಾಡಿನ ಹೆಂಚುಗಳನ್ನು ಎಣ್ಣಿಸುತಿದ್ದಳು. ಮಕ್ಕಳು ಪ್ರಾಂಗಣವನ್ನು ಸೇರಿದ್ದುದರಿಂದ ಒಳಗಡೆ ಎಳ್ಳು ಬೀಳಿಸಿದರೂ ಕೇಳಿಸುವಂತಹ ಶಾಂತಿ. ಆದರೂ ಮಾನಸಿಕ ಶಾಂತಿ ಧೂಳೀಪಟವಾದುದರಿಂದ ಹೊರಗಣ ಶಾಂತಿಗೆ ಬೆಲೆಯೇ ಇಲ್ಲ.

ಪಟ. ಪಟ. ಪಟ. ಪಟ. ಸತ್ ಶಾಂತಿಯ ತಲೆಯ ಮೇಲೆ ಸುತ್ತಿಗೆಯಿಂದ ಬಡಿಯುವಂತೆ ಧ್ವನಿಸಿದ ಆ ಸದ್ದು!

ಪಟ. ಪಟ. ಪಟ. ಪಟ.

ಮೋಹಿನಿ ಬಾಗಿಲಿನ ಕಡೆಗೆ ದೃಷ್ಟಿ ಹೊರಳಿಸಿದಳು. ಬೂಟುಕಾಲಿನ ಸದ್ದು ಸನಿಹಕ್ಕೆ ಬರುತ್ತಲೂ ಗೋಪು ಕಾಣಿಸಿಕೊಂಡ. ಅವನು ನೇರವಾಗಿ ಬೀರುವಿನೆಡೆಗೆ ಹೋಗಿ ಸೂಟ್‌ಕೇಸ್ ತೆಗೆದ. ಸಣ್ಣ ಕೈಚೀಲದಿಂದ ನೋಟುಗಳ ಕಟ್ಟನ್ನು ತೆಗೆದು ಅದರ ತಳಕ್ಕೆ ಸೇರಿಸಿದ. ಮಲಗಿದ್ದ ಮೋಹಿನಿ ಎದ್ದು ಕುಳಿತು ಅಚ್ಚರಿಯಿಂದ ನಿಟ್ಟಿಸಿದಳು. ಒಂದೇ, ಎರಡೇ, ನಾಲ್ಕಾರು ಕಟ್ಟು?

ಒಂದೇ ಉಸಿರಿಗೆ ಕೇಳಿದಳು ಮೋಹಿನಿ "ಎಲ್ಲಿತ್ತು ಅದು?"

"ಸುಮ್ಮನಿರು ಸುದ್ದಿ ಬಡ ಬೇಡ?" ಬಾಯಿಯ ಮೇಲೆ ಬೆರಳಿಟ್ಟು ಎಚ್ಚರಿಸಿದ.

"ನಿಜ ಹೇಳು! ಎಲ್ಲಿತ್ತು ಅಷ್ಟೊಂದು ಹಣ?" ಅತ್ಯಂತ ಉದ್ವೇಗದಿಂದ ಕೇಳಿದಳು ಮೋಹಿನಿ. ಮುಖಕಣ್ಣುಗಳಲ್ಲಿ ಭಯ ಮುದ್ರೆ ಮುದ್ರಿತವಾಯಿತು.

"ನಿನಗೇಕೆ ಅಷ್ಟು ಗಾಬರಿ? ಎಲ್ಲೋ ಕಳ್ಳಮಾಲು ಸಿಕ್ಕಿತು ಕದ್ದಿದ್ದಲ್ಲ!"

"ಕಳ್ಳ ಮಾಲಾದರೆ ಮಾಲೀಕರಿಗೆ ಕೊಡದೆ ಇಲ್ಲಿಗೇಕೆ ತಂದೆ? ಇಂಥ ದುರ್ವ್ಯವಹಾರವನ್ನೇಕೆ ಮಾಡುವೆ? ಇದು ಕೀಳ್ತನವಲ್ಲವೇ?"

"ಕೀಳ್ತನವಲ್ಲ! ಅದೃಷ್ಟ ಎಂದುಕೋ!"

"ಛಿಃ ! ಛಿಃ! ಹಾಲು ಕುಡಿದ ಮಕ್ಕಳೇ ಬದುಕುವುದು ಕಷ್ಟ ಇನ್ನು ವಿಷ ಕುಡಿದ ಮಕ್ಕಳು ಬದುಕುವುದುಂಟೇ? ನೀನು ನರಕಕ್ಕೆ ಹೋಗುತ್ತಿ ಅಷ್ಟೆ."

"ನಿನ್ನ ಅಣ್ಣ ಸಂಪಾದಿಸಿದ್ದು ನ್ಯಾಯ ಮಾರ್ಗದಿಂದಲೇ? ಈಗೇಷ್ಟು ಮಜವಾಗಿದ್ದಾನೆ?"

"ಯಾರು ಹೇಗಾದರೂ ಇರಲಿ, ನಾವು ಸರಿಯಾಗಿರಬೇಡವೆ?"

"ನೀನು ಮಾತಾಡಬೇಡ. ಇದು ನನಗೆ ಸಂಬಂಧಪಟ್ಟದ್ದು!"

"ಗೋಪು...!"

"ನೀನೇನಾದರೂ ಬಾಯಿ ಬಿಟ್ಟರೆ ನಿನ್ನ ಸಿಗಿದು ಬಿಡುವೆ!"

ಮೋಹಿನಿ ದಡಕ್ಕನೆದ್ದು ಹೊರ ಹೋದಳು! ಭಯ – ಭೀತಿ–ಉದ್ವೇಗಗಳಿಂದ ಅಚ್ಛನ್ನವಾಗಿದ್ದ ಮುಖಬಿಂಬ ನೀಲಗಪ್ಪು ತಳೆದಿತ್ತು. ಅಡಿಗೆ ಮನೆಯ ಸ್ಟೂಲಿನ ಮೇಲೆ ಕುಸಿದು ಕುಳಿತುಕೊಂಡಳು. ಸುತ್ತಮುತ್ತ ಮೋಸ–ಕಪಟ–ಸುಳ್ಳು–ಕ್ರೂರ–ಅಮಾನವೀಯತೆಗಳ ರುದ್ರ ರೂಪಗಳು ಹಲ್ಲು ಕಿರಿಯುತ್ತ ಭಯಂಕರ ವರ್ತುಲಗಳನ್ನು ನಿರ್ಮಿಸಿದುವು. ದೇಹದಾದ್ಯಂತ ಬಿಸಿನೆತ್ತರಿನ ಝುರಿ ಜರ್‍ರನೆ ಹರಿದಾಡಿತು.

ದಡ. ದಡ. ದಡ. ದಡ.!

ಎರಡೂ ಕೈಗಳಿಂದ ಎದೆಯನ್ನು ಅದುಮಿಹಿಡಿದು ಕೊಂಡಿದ್ದಾಳೆ. ಕಿವಿಯ ಸನಿಹದಲ್ಲಿಯೇ ಕೇಳಿಸುತ್ತಿದೆ ಆ ಘೋಷ, ಅರೆ! ಎಲ್ಲಿಯ ಘೋಷ? ಸುತ್ತ ಮುತ್ತ ಗಿರಿಗಿರಿ ಸುತ್ತಿ ನೋಡಿದುವು ನಯನದ್ವಯಗಳು. ಎಲ್ಲಿಯೂ ಅದರ ಸುಳಿವಿಲ್ಲ. ಇಲ್ಲೇ–ಎದೆಯ ನೆಲೆಯಲ್ಲೇ ಕೇಳಿಬರುತ್ತಿದೆ. ಅದೇ ಘೋಷ! ಬಹುಶಃ ಹೃದಯ ಮೃದಂಗವೇ ಘೋಷಿಸುತ್ತಿರಬೇಕು!

ಆ ಮುಹೂರ್ತದಲ್ಲಿಯೇ ದಡ ದಡನೆ ಒಳಬಂದ ಗೋಪು. ಮುಖ ಬಿಂಬದಲ್ಲಿ ಕುಕರ್ಮ ಕುಕಲ್ಪನೆಗಳ ಕಪ್ಪುಛಾಯೆ ದಟ್ಟೈಸಿತ್ತು. ಕಣ್ಣುಗಳ ಛಾಯೆ...? ದುರ್ವಿಧಿಯೊಡನೆ ಸಂಧಿ ಮಾಡಿಕೊಂಡ ಸಾಂಕೇತಿಕ ಛಾಯೆ...? ಎದೆಯನೆತ್ತರನ್ನು ಹೆಪ್ಪುಗಟ್ಟಿಸಿತು. ತನ್ನನ್ನು ತಾನು ಸಾವರಿಸಿಕೊಳ್ಳಲು ಪ್ರಯತ್ನಿಸಿದಳಾದರೂ ಸಾಧ್ಯವಾಗಲಿಲ್ಲ. ದೇಹದಾದ್ಯಂತ ಕಂಪನದ ಝುರಿ ಹರಿದಾಡಿ ಹೋಯಿತು.

ಗೋಪು ಸನಿಹಕ್ಕೆ ಬಂದು ಮೈಗೆ ಮೈ ತಾಗಿಸಿ ನಿಂತು ವಿಜಾತೀಯವಾದ ದನಿಯಲ್ಲಿ ನುಡಿದ "ಜೋಕೆ! ಯಾರಿಗಾದರೂ ಹೇಳಿಯೆ!"

ನೀನು ಮನೆಗೇಕೆ ತಂದೆ? ಎಲ್ಲಾದರೂ ಇಟ್ಟುಕೋ. ನನಗೆ ದುಷ್ಕರ್ಮದ

ಸೋಂಕು ಬೇಡವೇ ಬೇಡ. ಮಕ್ಕಳಿಗೂ ಖಂಡಿತ ಬೇಡ!"

"ಇಂದಿಗಿರಲಿ. ಆಮೇಲೆ ಬೇರೆ ಏರ್ಪಾಡು ಮಾಡುವೆ!"

ಹಿಂದಿರುಗಿದ ಅವನು ಹೊಸ್ತಿಲಿನ ಮೇಲೆ ನಿಂತು "ಜೋಕೆ! ತಿಳಿದಿರು! ಎಲ್ಲಾದರೂ ಎಚ್ಚರ ತಪ್ಪೀಯೆ!"ಎಂದು ವಿನಯವಂತಿಕೆಯಿಂದ ಗದ್ದರಿಸಿದ.

ಮೋಹಿನಿ ಅದೆಷ್ಟು ಹೊತ್ತು ಮೈಮರವಟ್ಟು ಕುಳಿತಿದ್ದಳೋ...ಅನಂತರ ಯಾವುದೋ ದೃಢ ನಿರ್ಧಾರಕ್ಕೆ ಬಂದಂತೆ ದಡಕ್ಕನೆದ್ದು ಮನೆಯ ಬಾಗಿಲನ್ನು ಮುಚ್ಚಿ ಬೀಗ ಹಾಕಿ ಮಕ್ಕಳನ್ನು ಕರೆದುಕೊಂಡು ಹೊರಟಳು.

ಕೇಳಿದಳು ಸಕ್ಕೂ "ಎಲ್ಲಿಗಮ್ಮಾ ಹೋಗುವುದು?"

ಮನಃಬುದ್ಧಿಗಳು ಯಾವ ಯಾವ ಲೋಕದಲ್ಲಿ ವಿಹರಿಸುತಿದ್ದವೋ ಉತ್ತರಿಸಲಿಲ್ಲ ಮೋಹಿನಿ. ಅಕ್ಕನ ಪ್ರಶ್ನೆಗೆ ಉತ್ತರ ಬಾರದಿರಲು ನೀನಾ-ಮೀನಾ ಇಬ್ಬರೂ ತಾಯಿಯನ್ನು ಹಿಡಿದು ಅಲುಗಾಡಿಸಿ ಕೇಳಿದರು "ಎಲ್ಲಿ ಹೋಗೋಣ?"

"ಕಮಲಾ ಮನೆಗೆ"

"ಅಲ್ಲಿಗೆ ನೀನು ಹೋಗಿಯೇ ಇರಲಿಲ್ಲವಲ್ಲಾ?"

"ಈವೊತ್ತು ಹೋಗೋಣ ಅನ್ನಿಸಿದೆ. ಅದಕ್ಕೇ..."

ರಸ್ತೆಯ ಕೊನೆಯಲ್ಲೇ ಬಸ್ಸಿನ ನಿಲ್ದಾಣ. ಅಲ್ಲಿಗೆ ಪ್ರತಿ ಹತ್ತು ನಿಮಿಷಗಳಿಗೊಮ್ಮೆ ಬಸ್ಸುಗಳು ಬರುತ್ತಿರುತ್ತವೆ, ಹೋಗುತ್ತಿರುತ್ತವೆ. ನೂರನಲವತ್ತನಾಲ್ಕನೆ ನಂಬರಿನ ಬಸ್ಸು ಕುಷಾಲನಗರಕ್ಕೆ ಹೋಗುತ್ತದೆ. ಅಲ್ಲಿಯ ಬಸ್ ನಿಲ್ದಾಣದಿಂದ ಕಮಲಳ ಮನೆ ಹತ್ತಿರವೇ...ಹೋಗುವುದೇನೋ ಸರಿ. ಮುಂದೇನು?....ಮುಂದೇನು? ಮತ್ತೆ ಮತ್ತೆ, ಪುನಃ ಪುನಃ ಅದೇ ಪ್ರಶ್ನೆ.

ಬಸ್ಸು ಹೊರಡಲು ಅಣಿಯಾಗಿತ್ತು. ಜನ ಹತ್ತುತ್ತಿದ್ದರು. ಹತ್ತಿರ ಹೋಗಿ ನೋಡಿದರೆ ಒಂದು ನೊಣಕ್ಕೂ ತಾವಿಲ್ಲದಷ್ಟು ಭರ್ತಿ. ನಿರಾಶೆಯನಿಟ್ಟುಸಿರು ಬಿಟ್ಟು ಇನ್ನೊಂದು ಬಸ್ಸಿನೆಡೆಗೆ ಹೋದರೆ ಅದೂ ಭರ್ತಿ. ಅವೆರಡು ಹೊರಟರೂ ಇನ್ನೂ ಎರಡೂ ಮೂರು ಬಸ್ಸಿಗಳಿಗಾಗು ವಷ್ಟು ಜನ ಕಾದಿದ್ದಾರೆ. ಅಬ್ಬಾ! ಏನು ಸಂದಣಿಯೋ. ಯಾರು ಮುನ್ನುಗ್ಗುತ್ತಾರೋ ಅವರಿಗೆ ಸ್ಥಳ. ಅತ್ತಇತ್ತ ಕಣ್ಣು ಹೊರಳಿಸುವುದರೊಳಗಾಗಿ

ಇನ್ನೆರಡು ಬಸ್ಸು ಬಂದುವು. ಮೊದಲು ಬಂದವರೆಲ್ಲಾ ನುಗ್ಗಿದರು. ಕೆಲವು ಗಳಿಗೆಯೊಳಗಾಗಿ ಅವೂ ಭರ್ತಿಯಾಗಿ ಹೊರಟುವು. ಅವು ಹೋದದಿಕ್ಕನ್ನೇ ನಿರಾಶಾಭರಿತ ದೃಷ್ಟಿ ನಿಟ್ಟಿಸಿತು. ಬಸ್ಸಿನ ವೇಳಾ ಪಟ್ಟಿಯ ಪ್ರಕಾರ ಇನ್ನು ಹತ್ತು ನಿಮಿಷದ ನಂತರ ಬಸ್ಸು ಬರುತ್ತೆ. ಅಲ್ಲಿಯ ತನಕ ನಿಲ್ದಾಣದಾಶ್ರಯವೇ ಗತಿ.

ಡ್ಯೂಟಿಯ ಮೇಲಿದ್ದ ಸಬ್‌ಇನ್ಸ್‌ಪೆಕ್ಟರ್ ಇತ್ತ ಬಂದ. ಅವನು ಹಿಂದೆ ಮುಂದೆ ಓಡಾಡಿ ಈ ಕಡೆ ಬಂದು ಮೋಹಿನಿಯ ಮೇಲೆ ವಕ್ರದೃಷ್ಟಿ ಹಾಯಿಸಿ ಕೇಳಿದ "ಈ ದಿನ ಗೋಪು ಏಕೆ ಬರಲಿಲ್ಲ ಡ್ಯೂಟಿಗೆ!"

"ಬೆಳ್ಳಿಗ್ಗೆಯೇ ಹೊರಟನಲ್ಲ ಡ್ಯೂಟಿಗೆ?"

"ಬದ್ಮಾಷ್! ಬಂದೇ ಇಲ್ಲ!"

"ನನಗೇನೂ ತಿಳಿಯದು...."

ಅವನು ಇನ್ನೂ ಮಾತಾಡಿಸಬೇಕೆಂಬ ಚಪಲತೆಯಿಂದ ಅಲ್ಲೇ ನಿಂತನೇನೋ ಹೌದು. ಮಾತಾಡಿಸಲು ವಿಷಯವೇನೂ ಹೊಳೆಯದೆ ತಬ್ಬಿಬ್ಬಾದಂತೆ ಹಿಂದಿರುಗಿದ. ಒಂದೆರಡು ಗಳಿಗೆ ನೋಡಿದ ನೋಟಕ್ಕೆ ಪುನಃ ನೋಡುವ ಚಟವೇ ಚಟ. ಅವನು ಅತ್ತ ಸರಿಯಲಾರ, ಇತ್ತ ನಿಲ್ಲಲಾರ.

ಅಷ್ಟರಲ್ಲೇ ಬಸ್ಸು ಬಂದಿತು. ಮೋಹಿನಿ ಮಕ್ಕಳೊಡನೆ ಹತ್ತಿದಳು. ಈ ಸಲಿ ಅಷ್ಟು ಜನ ಒತ್ತಡವಿರಲಿಲ್ಲವಾದುದರಿಂದ ಕುಳಿತುಕೊಳ್ಳಲು ಸ್ಥಳ ಸಿಕ್ಕಿತು. ಸಬ್‌ಇನ್ಸ್‌ಪೆಕ್ಟರ್ ಕಿಟಕಿಯ ಬಳಿಗೆ ಬಂದು ಮೋಹಿನಿಯನ್ನು ಕುರಿತು "ಈ ಚಾಕಲೇಟನ್ನು ನಿನ್ನ ಮಕ್ಕಳಿಗೆ ಕೊಡು" ಎಂದು ಕೈ ನೀಡಿದ.

"ಖಂಡಿತ ಬೇಡ! ಬೇಡ!"

ಮೊಗ ಇತ್ತ ತಿರಿವಿಕೊಂಡಳು ಮೋಹಿನಿ. ಅಷ್ಟರಲ್ಲೇ ಬಸ್ಸು ಹೊರಟು ದುದರಿಂದ ಅವನು ಹಿಂದುಳಿದ. ಮೋಹಿನಿಗೆ ಜೀವ ಬಂದಂತಾಯಿತು ....ನೀನಂದು ಹಣ ಕೇಳಲು ಆಫೀಸಿಗೆ ಹೋಗಿದ್ದೇ ತಪ್ಪಾಯಿತು! ಎಂದು ಕೂಗಿ ಹೇಳಿತು ಮನಸ್ಸು.

"ಈ ಕೆಟ್ಟ ಸಮಾಜದಿಂದ ಹೇಗೆ ರಕ್ಷಣೆ?"

"ಧೈರ್ಯ ಸ್ಥೈರ್ಯ!"

"ಶಿವಾ, ಶಿವಾ! ಈ ಬಲಿಷ್ಠರ ಮುಂದೆ ಧೈರ್ಯ ಸ್ಥೈರ್ಯ?"

"ಅದು ಹೊರತು ಬೇರೆ ದಾರಿಯೇ ಇಲ್ಲ."

"ಎಲುಬುಗಳೆಲ್ಲಾ ನಿಟಿ ನಿಟಿ ಮುರಿಯುತ್ತವೆ."

"ಇದೇ ಹಿಂದೂಸ್ಥಾನದ ಸುಸಂಸ್ಕೃತಿ!"

ಆ ಕ್ಷಣವೇ ತುಟಿಗಳಲ್ಲಿ ತಿರಸ್ಕಾರದ ನಗೆ ಮೂಡಿ ಮಾಯವಾಯಿತು.

ಬಸ್ಸು ನಿಲ್ದಾಣದಲ್ಲಿ ನಿಂತಿತು. ಅಲ್ಲಿಂದ ಮುಂದೆಲ್ಲಾ ಕುಶಾಲ ನಗರದ ಹರವು. ಜನ, ಜನ, ರಸ್ತೆಯ ತುಂಬೆಲ್ಲಾ ಜನಜಾಪತ್ತುಗಳ ಗಜಿ ಬಿಜಿ. ವಾಹನಾದಿಗಳ ಹಿರಿಯ ಗದ್ದಲ. ಮಾತಿನ ಮರ್ಮರ. ಹಲವು ಭಾಷೆಗಳ ವಿಚಿತ್ರದಾಂಧಲೆ.

ಆ ಗದ್ದಲ ನೋಡಿದರೆ ರಸ್ತೆಗಿಳಿಯುವುದೇ ಬೇಡ ಎಂಬಷ್ಟು ಕಿನಿಸಿಗೆ.

ಹೆದ್ದಾರಿಯನ್ನು ಹಾಯ್ದು, ಅಡ್ಡದಾರಿಯನ್ನು ಹಿಡಿದು ಒಂದೆರಡು ತಿರುವು ಕಳೆದ ನಂತರ ಕಮಲಳ ಮನೆ. ಮನೆ ಮುಟ್ಟುವವರೆಗೆ ಕಮಲಾ ಇರುತ್ತಾಳೋ ಇಲ್ಲವೋ ಎಂಬ ಯೋಚನೆಯಿತ್ತು. ಕರೆಗಂಟೆಯ ಕರೆಗೆ ಅವಳೇ ಬಂದು ಕದ ತೆರೆದಾಗ ತುಟಿಗಳಲ್ಲಿ ಎಳೆ ನಗು ಮೂಡಿ ಮಾಯವಾಯಿತು. ಕಮಲಾ ಅತ್ಯಂತ ಆತ್ಮೀಯತೆಯಿಂದ ಬರಮಾಡಿಕೊಂಡು "ನೀನು ನಮ್ಮ ಮನೆಗೆ ಬರದೆ ಎಷ್ಟು ವರ್ಷಗಳಾಗಿತ್ತು? ಈವೊತ್ತು ಸೂರ್ಯ ಪಶ್ಚಿಮದಲ್ಲಿ ಹುಟ್ಟಿರಬೇಕು?"

"ಕುಶಾಲನಗರಕ್ಕೆ ಬರುವುದು ಕಷ್ಟವಾದುದರಿಂದ ನಿನ್ನ ಮನೆಗೆ ಬರಲಿಲ್ಲ ಅಷ್ಟೆ. ಇಲ್ಲದಿದ್ದರೆ ನಿನ್ನ ಮನೆಗೆ ಬರುವುದಕ್ಕೇನು ಅಡ್ಡಿ?" ಎಂದು ನಿಟ್ಟುಸಿರು ಹೊರಹಾಕಿ ಪುನಃ "ನಿನ್ನ ಮನೆಗೆ ಆನಂದದಿಂದ ಬರುತಿದ್ದೆ. ಭಗವಂತ ನನ್ನ ಎಲ್ಲಾದಾರಿಗೂ ಮುಳ್ಳು ನೆಟ್ಟಿದಾನೆ!"

"ನಿನ್ನ ಮುಖ ನೋಡುವಂತಿಲ್ಲ. ಏಕೆ ಮೈ ಚೆನ್ನಾಗಿಲ್ಲವೇ?"

"ಮೈ ಮನ ಎರಡೂ ಚೆನ್ನಾಗಿಲ್ಲ. ಅದಕ್ಕೇ ನಿನ್ನ ನೋಡುವ ಇಚ್ಛೆ ಮೂಡಿದ್ದು!"

"ಬಾ, ಅದು ನಿನ್ನನ್ನು ನೋಡಿದಾಗಲೇ ಅರ್ಥವಾಯಿತು."

ಕಮಲೆಯ ಮಕ್ಕಳೊಂದಿಗೆ ಈ ಮಕ್ಕಳೂ ಸೇರಿಕೊಂಡು ಅಂಗಳಕ್ಕೆ ಹಾರಿದವು. ಅಲ್ಲಿ ಅವರ ಆಟವೇ ಆಟ. ನಗುವಿನ ಕೇಕೆ. ಮಾತಿನ ಗದ್ದಲ

ಇಡೀ ಅಂಗಳವನ್ನು ತುಂಬಿತು.

ಮೋಹಿನಿ ಕಮಲೆಯ ಕೈ ಹಿಡಿದುಕೊಂಡು ತನ್ನ ಒಡಲ ಸಂಕಟವನ್ನು ತೋಡಿಕೊಂಡಳು.

"ನಾನಂತೂ, ಈ ಬಾಳಿನಲ್ಲಿ ಇರುವುದು ಸಾಧ್ಯವೇ ಇಲ್ಲ ಎಂಬ ತೀರ್ಮಾನ ಕೈಕೊಂಡಿರುವೆ. ಮುಂದೇನು ಎಂಬದನ್ನು ಯೋಚಿಸಬೇಕಾಗಿದೆ. ಮಕ್ಕಳಿಲ್ಲದಿದ್ದರೆ ನನಗೆ ಖಂಡಿತ ಜೀವನ ಬೇಡವಾಗಿತ್ತು. ಈ ಪುಟ್ಟ ಪುಟ್ಟ ಮಕ್ಕಳಿಗಾಗಿ ಬದುಕು."

"ದೇವರೇ ನಿನಗೆ ಧೈರ್ಯ ಕೊಡಬೇಕು."

೮

ಕಮಲಾ ತಾಯಿ ಏಳು ಮಕ್ಕಳನ್ನು ಹೊತ್ತು ಹೆತ್ತು ಹಂತ ಹಂತವಾಗಿ ನೆತ್ತರನ್ನು ಬಸಿದು ಬೆಂಡಾದ ವ್ಯಕ್ತಿ. ಎಪ್ಪತ್ತರ ಹರೆಯ. ಆದರೂ ಅವಳದು ಚಟುವಟಿಕೆಯ ಜೀವನ. ನಾಲ್ಕು ಮಂದಿ ಹಿರಿಯ ಗಂಡು ಮಕ್ಕಳು ಸರಕಾರಿ ಅಧಿಕಾರಿಗಳಾಗಿದ್ದಾರೆ. ಇನ್ನು ಇಬ್ಬರು ಹೆಣ್ಣು ಮಕ್ಕಳಲ್ಲಿ ಹಿರಿಯಾಕೆ ಬೊಂಬಾಯಿಯಲ್ಲಿ....ಎರಡನೆಯ ಮಗಳು ಕಲಿಕತ್ತೆಯಲ್ಲಿ ನೆಲೆಸಿದ್ದಾರೆ. ಕಮಲಾ ಎಲ್ಲರಿಗಿಂತ ಕಿರಿಯಳು. ಅವಳ ಗಂಡ ಮಿಲಿಟರಿಯಲ್ಲಿ ಸುಬೇದಾರನಾಗಿದ್ದು ರಾಷ್ಟ್ರಕ್ಕೆ ಆತ್ಮಾರ್ಪಣೆ ಮಾಡಿದುದರಿಂದ ಕಮಲಾ ತಾಯಿಯನ್ನು ಆಶ್ರಯಿಸಿಬೇಕಾಯಿತು. ತಂದೆ ಮೃತನಾದುದು ಕಮಲೆಯ ಮದುವೆಯಾದ ತರುಣದಲ್ಲಿಯೇ. ತಂದೆ ಅಂತಹ ಧನಾಢ್ಯನೇನೂ ಅಲ್ಲ. ಶಾಲಾ ಮಾಸ್ತರು. ಸಂಜೆ ಹೊತ್ತಿನಲ್ಲಿ ಮನೆಪಾಠ. ಇಷ್ಟರಿಂದ ಜೀವನ. ಏಳು ಮಂದಿ ಮಕ್ಕಳನ್ನು ಸಾಕಿ ತೀರ ಸೇರಿಸಬೇಕಾದರೆ ಮಡದಿ ಎಷ್ಟೆಷ್ಟು ಕಣ್ಣೀರು ಕರೆದಿದ್ದಳೋ.....

ಅಂತೂ, ತೀರ ಹಚ್ಚಿದ್ದಾಯ್ತು. ಇನ್ನು ಜೀವನ ನಿರಾಳ ಎಂದು ಕೊಂಡರೆ ಕುಲಪುತ್ರರ ಕೀಳರಿಮೆಯಿಂದ ಉದ್ಭವಿಸಿದ ಅತ್ಯಂತ ಕಹಿ ವಾತಾವರಣ ಕೊರಳಿಗೆ ಉರುಳು. ದಿನ ದಿನಕ್ಕೂ ಭುಗಿಲೇಳುವ ದ್ವೇಷ-

ರೋಪ-ಅಸಡ್ಡೆ-ಅಲಕ್ಷ್ಯಗಳ ದಶಾವತಾರಗಳಿಂದಾದ ಹಿಂಸೆಯಿಂದಲೋ ಏನೋ ಯಜಮಾನ ಹೃದಯಾಘಾತಕ್ಕೆ ಬಲಿಯಾದ. ಸತಿ ಸುಮಂಗಳೆ ಮಂಗಳ ದ್ರವ್ಯ ಕಳೆದುಕೊಂಡು ಅಮಂಗಳೆಯಾಗಿ ಕಣ್ಣೀರ ಕಡಲಿನಲ್ಲಿ ಮುಳುಗಿ ಹೋದಳು. ತನಗೂ ಏಕೆ ಹೃದಯಾಘಾತವಾಗಬಾರದು, ಭಗವಂತ ನನ್ನನ್ನೇಕೆ ಬಿಟ್ಟು ಹೋದ? ಎಂಬುದು ಬಗೆ ಹರಿಯದ ಪ್ರಶ್ನೆ.

ದುಃಖದ ಕೋಡಿ ಪೂರ್ತಿ ಹರಿದು ಹೋಗುವ ಮುನ್ನ ಕಮಲಾ ವಿಧವೆ. ಮಗಳ ಆಶ್ರಯಕ್ಕಾಗಿ ಮನೆ ಬಿಟ್ಟಳುಶಾಂತಿ. ಕುಲಪುತ್ರರ ದುರ್ಲಕ್ಷಕ್ಕೊಂದು ಸವಾಲಿನಂತೆ ಮಗಳೊಂದಿಗೆ ವಾಸ್ತವ್ಯ ಹೂಡಿ, ಮಗಳ ಪ್ರತಿಯೊಂದು ಕೊರತೆಯನ್ನೂ ತುಂಬುವುದರಲ್ಲಿ ತಾನೇ ಮುಂದಾದಳು.

ಸರಕಾರ ಕೊಟ್ಟ ಅಲ್ಪ ಪರಿಹಾರದಲ್ಲಿ ವಾಸಕ್ಕೊಂದು ಕುಟೀರ ಮತ್ತು ಪೆನ್‌ಶನ್-ನಿಂದ ಜೀವನ; ಇಬ್ಬರು ಮೊಮ್ಮಕ್ಕಳ ಜವಾಬ್ದಾರಿ ಹೊತ್ತು ಬೌದ್ಧಿಕ ಜೀವನಕ್ಕೆ ನಾಂದಿ ಹಾಡಿದಳು. ಕುಲಪುತ್ರರ ಸಹಾಯ ಕಿಂಚಿತ್ತೂ ಬೇಡಲಿಲ್ಲ.

ನಾಲ್ವರು ಸುಪುತ್ರರೂ ತಂದೆಯ ಮನೆಗಾಗಿ ಕೈ ಕೈ ಮಸಗಿ ಅಖಾಡಕ್ಕಿಳಿದುದನ್ನು ದೂರದಿಂದ ಗಮನಿಸಿದರೂ ಚಕಾರವೆತ್ತಲಿಲ್ಲ. ತಾನೇ ಕಷ್ಟಪಟ್ಟು ಒಪ್ಪವಿಟ್ಟ ಮನೆಗೆ ಒಮ್ಮೆಯಾದರೂ ಹಿಂದಿರುಗಿ ಹೋಗಲಿಲ್ಲ. ಮಕ್ಕಳನ್ನು ಕೈಕಾಸಿಗಾಗಿ ಬೇಡಲಿಲ್ಲ. ತನ್ನ ಚಿನ್ನಾಭರಣಗಳನ್ನು ಮಾರಿ ಬ್ಯಾಂಕಿನಲ್ಲಿಟ್ಟು ಅದರ ಬಡ್ಡಿಯಿಂದ ಮತ್ತು ಪತಿಯ ನಿವೃತ್ತಿ ವೇತನದಿಂದ ತನ್ನ ಬಾಳ್ವೆಯನ್ನು ಚೊಕ್ಕವಾಗಿಯೇ ನಿರೂಪಿಸಿಕೊಂಡಳು ಶಾಂತಿ. ಪ್ರಾವಿಡೆಂಟ್ ಫಂಡ್‌ಮೊದಲಾದ ಹಣಕ್ಕೆ ಸುಪುತ್ರರು ಹದ್ದಿನಂತೆ ಬಾಯಿ ಚಾಚಿದುದರಿಂದ ಬ್ಯಾಂಕಿನಲ್ಲಿದ್ದ ಉಳಿಕೆಯ ಹಣವನ್ನೂ ಕೇಳಲಿಲ್ಲ ಆಕೆ.

ತಾಯಿಗೆ ಮಗಳ ಆಶ್ರಯ. ಮಗಳಿಗೆ ತಾಯಿಯ ಆಶ್ರಯ.

ಕಮಲೆಯ ಜೀವನದ ಅತ್ಯಂತ ದಾರುಣ ಚಿತ್ರ ಇದಾದರೆ ಸುಮನಳದು ಮತ್ತೊಂದು ಬಗೆಯದು. ಸುಮನಾ ಬಿ. ಎ. ಮುಗಿಸಿ ಜೀವನರಂಗಕ್ಕೆ ಕಾಲಿಟ್ಟವಳು. ಮದುವೆಯಲ್ಲಿ ವರೋಪಚಾರ, ಮತ್ತೊಂದು, ಮಗದೊಂದು ನಡೆದು ಸಂತಸಪೂರ್ಣವಾಗಿ ಗೃಹಸ್ಥ ಜೀವನಕ್ಕೆ ಕಾಲಿಟ್ಟರು ನವದಂಪತಿಗಳು. ಜೀವನದ ನವೋನವ ಕಾಲಮಾನ ಸಂತಸದ ರಸವಾಹಿನಿಯಲ್ಲಿ ತೇಲಿ

ಹೋದರೂ ಅನಂತರ ದುರಾಸೆಯ ಪಿಡುಗು ಮೊಳಕೆಯೊಡೆದು ಸಸಿಯಾಯಿತು. ಹಣಕ್ಕಾಗಿ ಒಡವೆ ವಸ್ತುಗಳಿಗಾಗಿ ಕಿರುಕುಳ ಆರಂಭವಾಯಿತು. ಮೊದಮೊದಲು ಸಣ್ಣಕಿಡಿಯಾಗಿ ಕಾಣಿಸಿಕೊಂಡ ಅದು ಅನಂತರ ಬೃಹದಾಕಾರವಾಗಿ ಬೆಳೆಯತೊಡಗಿತು. ಸುಮನಾ ಕಡು ಸಂಕಟ–ಸಂಕಷ್ಟಗಳ ಗಣಿಯಾದಳು. ಮೈ ಮೂಳೆಗಳೂ ನಿಟಿ ನಿಟಿ ಎಂದುವು. ಅಪಾರವಾದ ನೋವು ತುಂಬಿದ ಒಡಲಲ್ಲಿ ಔರಸ ಪುತ್ರ ಕೃಷ್ಣನಿಗೆ ಜನ್ಮಧಾರಣೆ ಮಾಡಿದಳು. ಅಸಹನೀಯವಾದ ದಾರುಣ ಜೀವನದಲ್ಲಿಯೇ ಪುತ್ರ ಜನನವಾಯಿತು. ಮಗುವಿನ ಜನನದಿಂದ ಸಂತಸ ಮೂಡುವುದಕ್ಕಿಂತ ದುಃಖವೇ ಹೆಚ್ಚ ತೊಡಗಿತು. ಹೇಗೋ ಹಾಗೆ ಸಂಬಾಳಿಕೊಳ್ಳುತ್ತಿದ್ದ ಅವಳನ್ನೂ ತೊಟ್ಟಿಲ ಮಗುವನ್ನೂ ಕರೆದುಕೊಂಡರೂ ಮತ್ತೂ ಅದೇ ವರದಕ್ಷಿಣೆಯ ಹಗರಣ. ಸುಮನಾ ಮಗುವಿನ ಭವಿಷ್ಯವನ್ನು ನೆನೆದು ಕಿರುಕುಳವನ್ನು ಸಹಿಸಿ ಕೊಳ್ಳುತಿದ್ದರೂ ಕೊನೆಗೊಮ್ಮೆ ಗರ್ಭಿಣಿ ಮಡದಿಯನ್ನು ಹೊರಹಾಕಿದ ಪತಿಮಹರಾಯ. ಒಡಲಲ್ಲಿ ನಾಲ್ಕು ತಿಂಗಳ ಭ್ರೂಣ. ಕೈಯಲ್ಲಿ ಹದಿನಾರು ತಿಂಗಳ ಕೂಸು. ಕೈಯಲ್ಲಿ ಕಾಸಿಲ್ಲ. ತೌರು ಮನೆಯಲ್ಲಿ ತುಂಬಿದ ಸಂಸಾರ. ಆದರೊಂದಿಗೆ ತಾನೂ ಅಲ್ಲದೆ ತನ್ನ ಮಿಡಿಗೂಸುಗಳ ಸೇರ್ಪಡೆ. ಎಷ್ಟೋ ಸಲಿ ಈ ಜೀವನವೇ ಬೇಡ ಎಂದು ಯೋಚಿಸಿದ್ದುಂಟು ಕೊರಗಿದ್ದುಂಟು; ಆದರೇನು?" ಬೇಡ ಎಂದರೆ ಅಮಾಯಕ ಶಿಶುಗಳ ಗತಿ? ಪಾಪಕ್ಕೆ ಹೊಣೆಯಾಗಲೇ? ಪುಣ್ಯಕ್ಕೆ ಹೊಣೆಯಾಗಲೇ? ಎಂಬ ಪ್ರಶ್ನೆ ಎದ್ದಾಗಲೇ ಪುಣ್ಯಕ್ಕೆ ಹೊಣೆಯಾಗುವುದು ಒಳ್ಳೆಯದು ಎಂದಿತು ಆಂತರಂಗಿಕ ದೀನದಯಾ ಪಕ್ಷಿ. ಸುಮನಾ ದಿಟ್ಟಹೆಜ್ಜೆಯನ್ನು ಮುಂದಿಟ್ಟಳು.

ಕಮಲಾ–ಸುಮನಾ ಕೂಡಿಯೇ ಟೀಚರ್ ಟ್ರೈನಿಂಗ್ ಪಡೆದುಕೊಂಡು ಉಪಾಧ್ಯಾಯ ವೃತ್ತಿಗೆ ಇಳಿದರು. ಆದರೆ ಆ ಶಾಲೆಗಳು ವ್ಯಾಪಾರದ ಕೇಂದ್ರವಾದುದರಿಂದ ದುರ್ವ್ಯಾಪಾರಗಳ ಕೇಂದ್ರವೂ ಆದುವು. ಒಂದಲ್ಲ, ಒಂದು ರೀತಿಯ ಮಾನಸಿಕ ವೇದನೆ, ಆತ್ಮಿಕ ರಣಹಿಂಸೆ ಹೃದಯಾಘಾತ ಗೊಳಿಸದಿದ್ದುದು ಪುಣ್ಯ.

ಸುಮನಾಗೆ ಎಂದಾದರೂ ತುಂಬಿದ ಸಂಸಾರದಿಂದ ಹೊರ ಹೋಗಿ ಬದುಕಬೇಕೆಂಬ ಇಚ್ಛೆ. ಸುತ್ತ ಮುತ್ತಿನ ಪರಿಸರದಲ್ಲಿ ಮನೆಗಾಗಿ ಸದಾ

ಹುಡುಕುತ್ತಿರುತ್ತದೆ ಅಂತಃಚಕ್ಷು. ಆದರೂ ಈ ತನಕ ತನ್ನ ಇಚ್ಛೆ ಪೂರ್ಣಗೊಳ್ಳಲಿಲ್ಲ ಎಷ್ಟೋ ಮನೆಗಳನ್ನು ಹತ್ತಿ ಇಳಿದಳು. ಅವರು ಕೇಳುವ ಬಾಡಿಗೆ ವಗೈರೆಗಳು ಪ್ರಥಮ ಹೆಜ್ಜೆಯನ್ನೇ ಹಿಮ್ಮೆಟ್ಟಿಸುತ್ತದೆ; ನಿಟ್ಟುಸಿರಾಗಿ ಹೊರಹೊಮ್ಮುತ್ತದೆ ಹೃದಯಭಾರ. ಕಾಲೆಳೆದುಕೊಳ್ಳುತ್ತ ಹಿಂದಿರುಗುತ್ತಾಳೆ ಸುಮನಾ. ಸುತ್ತಮುತ್ತ ದುಃಖದ ವರ್ತುಲಗಳು ಸುಳಿಸುತ್ತುತ್ತವೆ. ಈ ಜೀವನ ಎಷ್ಟು ಘೋರ ಎಂಬುದು ಅರ್ಥವಾದುದು ಈಗಲೇ. ನಗುನಗುತ್ತ ಬಾಳು ಹೊಕ್ಕ ಎಳೆಯ ಜೀವ ವರುಷ ಮೂರು ದಾಟುವುದರೊಳಗಾಗಿ ಕಾಲ ಕಸವಾಗಿ ತೌರುಮನೆಗೆ ಹಿಮ್ಮರಳಿದಾಗ "ಸಧ್ಯ ಜೀವಂತಳಾಗಿ ಹಿಂದಿರುಗಿದೆಯಲ್ಲಾ, ಸಾಕು. ಇದ್ದ ತುತ್ತು ಹಂಚಿ ಉಣ್ಣೋಣ" ಎಂದಳು ತಾಯಿ ಕಂಬನಿಸೂಸಿ. ಉಳಿದವರಾರೂ ಆ ಸೊಲ್ಲು ಎತ್ತಲಿಲ್ಲ. ಸಂಸಾರಕ್ಕೆ ಭಾರವಾದ ಜೀವಗಳನ್ನು ಕಂಡರೆ ಆಂತರಂಗಿಕವಾಗಿ ಜುಗುಪ್ಸೆ–ಕೋಪ–ಪರಿತಾಪಗಳ ಕೋಟೆ. ಎಂದಾದರೊಮ್ಮೆ ಭದ್ರಕೋಟೆ ಸಿಡಿಯಲೇಬೇಕು, ಸಿಡಿಯುತ್ತದೆ; ಎಂಬುದು ಅವಳಿಗೂ ಗೊತ್ತು. ಅದು ಸಿಡಿಯುವ ಮುನ್ನ ಒಂದು ಗೂಡು ಸಿಕ್ಕಿದರೆ ಸಾಕು ಎಂದು ಹಾತೊರೆಯುತ್ತದೆ ಜೀವ. ಮೈ ಮನಗಳೆಲ್ಲಾ ಸಂಕೋಚದಿಂದ ದಿನದಿನಕ್ಕೂ ಸಂಕುಚಿತಗೊಳ್ಳುತ್ತಿದ್ದರೂ ನಗೆಯ ಮುಖವಾಡ ತೊಡುವುದು ರೂಢಿ.

ಸುಮನಾ ತಾಯಿ ರತ್ನಳಿಗೆ ಮಗಳ ಬಾಳು ಧೂಳೀಪಟವಾದರೂ ಕ್ರೂರ ಹಿಂಸೆಯ ನಿವೃತ್ತಿ ಹಾಗೂ ತನ್ನ ಆಶ್ರಯ ಮನಸ್ಸಿಗೆ ಎಷ್ಟೋ ಸಮಾಧಾನ. ಅವಳ ಬಾಳನ್ನು ಇನ್ನೊಂದು ರೀತಿಯಲ್ಲಿ ರೂಪಿಸುವುದು ಸಾಧ್ಯವಾದರೆ ಸಾಕು; ಎಂಬುದು ಎದೆಯ ಹಾರೈಕೆ. ಅದಕ್ಕಾಗಿ ಅವಳು ದಿನಿನಿತ್ಯ ಬೇಡುವುದು ದೇವರನ್ನೆ.

* * *

ಸುಮನಾ ಕೆಲಸ ಮಾಡುತಿದ್ದ ಶಾಲೆಯ ಸಂಸ್ಥಾಪಕರು ಹಣಕ್ಕೆ ಬಾಯಿ ಬಿಡುವ ರಣಹದ್ದುಗಳು. ವಿದ್ಯಾರ್ಥಿಗಳಿಂದ ಬಸಿಯುವಷ್ಟು ಬಸಿದು, ಉಪಾಧ್ಯಯರನ್ನು ಹಿಂಡುವಷ್ಟು ಹಿಂಡಿ, ಅಧಿಕಾರಿಗಳನ್ನು ಪೋಷಣೆಗೈದು ಹಣದ ಕೋಟೆ ಕಟ್ಟುವುದರಲ್ಲಿ ನಿಸ್ಸೀಮರು. ಒಂದಲ್ಲ, ಒಂದು ರೀತಿಯಲ್ಲಿ

ಹಿಂಡಿ ಹಿಪ್ಪೆ ಮಾಡುವುದರಲ್ಲಿ ದಾಕ್ಷಿಣ್ಯವಿಲ್ಲ. ಸರಕಾರಿ ಶಾಲೆ ಹಿಡಿದರೆ ವರ್ಗಾವಣೆ ಗೋಳು ತಪ್ಪಿದ್ದಲ್ಲ. ಈ ಕಾರಣದಿಂದ ಅವಳು ಹಿಡಿದುದು ಖಾಸಗೀ ಸಂಸ್ಥೆ. ಎರಡು ಮೂರು ತಿಂಗಳಿಗೊಮ್ಮೆ ಸಂಬಳ. ಕೆಲವೊಮ್ಮೆ ಅರ್ಧ ಸಂಬಳ. ಬಿಟ್ಟರೆ ಗತಿಯಿಲ್ಲ. ಹೀಗಾಗಿ ಅದರಲ್ಲೇ ಉಳಿದಿದ್ದಾಳೆ. ಎಷ್ಟೋ ಸಲಿ ಕೆಲಸ ಬಿಟ್ಟು ಬಿಡಲೇ? ಎಂಬ ಯೋಚನೆಯೂ ಬರುತ್ತದೆ. ಬೇರೆ ಕೆಲಸ ದೊರೆಯದೆ ಬಿಟ್ಟು ಮಾಡುವುದೇನು? ಎಂಬುದು ಹಿರಿಯ ಪ್ರಶ್ನೆ.

ಸುಮನಾ ಇತರ ಉಪಾಧ್ಯಾಯರ ಸಂಕಷ್ಟದಲ್ಲಿ ತನ್ನ ಕಷ್ಟವನ್ನೂ ಹಂಚಿಕೊಂಡಳು.

ಅವಳ ಇಬ್ಬರೂ ಮಕ್ಕಳೂ ಶಾಲೆಗೆ ಹೋಗುತಿದ್ದಾರೆ. ಮಗ ಕೃಷ್ಣನಿಗೆ ಐದು ವರ್ಷ. ಮಗಳು ಕೃಪಳಿಗೆ ಮೂರು ವರ್ಷ. ಪತಿಗೃಹಕ್ಕೆ ನಮಸ್ಕಾರ ಹಾಕಿದ ಅವಳು ಮತ್ತೆ ಆ ಕಡೆ ಮುಖ ಹಾಕಲಿಲ್ಲ. ಮಕ್ಕಳಿಗೆ ತಂದೆಯ ಗುರುತು ಇಲ್ಲದಷ್ಟು ದೂರಾತಿದೂರ.

ಗಂಡು ಮಕ್ಕಳಿಗೆ ಮದುವೆಯಾಗಿ ಸೊಸೆಯಂದಿರು ಮನೆಗೆ ಬರುವ ಮುನ್ನ ತಾನೊಂದು ಮನೆ ಮಾಡಿಕೊಳ್ಳುವ ಯೋಚನೆ. ಆರ್ಥಿಕ ಪರಿಸ್ಥಿತಿ ಹೀಗಿರುವುದರಿಂದ ಅದು ಕನ್ನಡಿಯೊಳಗಣ ಗಂಟು. ಮನಸ್ಸು ಚಿಂತಾಬ್ಧಿಯಲ್ಲಿ ಮುಳುಗಿದರೂ ಮುಂದಿನ ದಾರಿಯನ್ನು ಅರಸುತಿತ್ತು ಅಂತಃಚಕ್ಷು.

ಸುಮನಾ ಕೃಷ್ಣನನ್ನು ಕೂಡಿಸಿಕೊಂಡು “ನೋಡು ಮಗೂ, ನೀನು ತರಗತಿಯಲ್ಲಿ ಹಿಂದೆ ಬೀಳಬಾರದು. ಎಲ್ಲರನ್ನೂ ಹಿಂದೆ ಬೀಳಿಸುವುದರಲ್ಲಿ ಮುಂದಾಗಬೇಕು. ನೀನು ತುಂಬಾ ಬುದ್ಧಿವಂತ. ನೀನು ನಿನ್ನ ಬುದ್ಧಿವಂತಿಕೆಯನ್ನು ಉಪಯೋಗಿಸಿಕೊಂಡರೆ ಸಾಕು; ಎಲ್ಲರನ್ನೂ ಖಂಡಿತ ಹಿಂದೆ ಬೀಳಿಸುತ್ತೀಯೆ!”

“ಹೌದಾ?”

“ಖಂಡಿತ ಹೌದು.”

ಬಾಲಕನ ಮುಖ ಅರಳಿ ಮದನ ಪುಷ್ಪವಾಯಿತು.

ದೂರ ಮೂರ ಅಂಬರದಲ್ಲಿ ಸರ್ಣಕಾಂತಿಯಿಂದ ರಂಗು ರಂಗಾದ ಹೆಮ್ಮುಗಿಲುಗಳ ಅನಂತಯಾತ್ರೆಯಲ್ಲಿ ಸೂರ್ಯ ಕಣ್ಮರೆಯಾಗಿದ್ದ.

ಹೊಂಗಾಂತಿಯ ಹರವು ಮಾಸಿದಂತೆ ಮಂಕುಮಾಯೆ ತಳೆದಿತ್ತು. ಗಗನದಲ್ಲಿ ಗೂಡುಗಳನ್ನರಸುತ್ತ ಹಾರಾಡುವ ಚುಕ್ಕಿ ಚುಕ್ಕಿಗಳಂತಹ ಹಕ್ಕಿಗಳ ಹಿಂಡು. ಮೈ ಮನಗಳಿಗೆ ಸುಖಸ್ಪರ್ಶ ನೀಡುವ ತಂಗಾಳಿಯ ಸೇವೆ.....

ನಿಸರ್ಗ ಸೌಂದರ್ಯದತ್ತ ಕೆಲವು ಗಳಿಗೆ ಗಮನ ಹರಿಸಿದರೂ ಅಮೋಘವಾದ ಶಾಂತಿ. ಆದರೆ, ಅತ್ತ ಗಮನ ಹರಿಸುವಷ್ಟು ಸ್ವಾಸ್ಥ್ಯ ತನಗಿದ್ದರಷ್ಟೆ? ಮನಃಬುದ್ಧಿಗಳು ಅಶಾಂತಿ ಮಯ.

ಎದೆಯಾಳದಿಂದ ದನಿಯೊಂದು ಹೊರಬಿತ್ತು. ಶಾಂತಿಗಾಗಿ ಅರಸುವವರು ಧೈರ್ಯಗೆಡಬಾರದು. ಧೈರ್ಯದಿಂದ ಮುನ್ನುಗ್ಗದೆ ಶಾಂತಿಯೂ ಇಲ್ಲ; ಗಮ್ಯಸ್ಥಾನವೂ ಇಲ್ಲ.

೬

ಮೋಹಿನಿ ಕಮಲೆಯ ಮನೆಯಲ್ಲಿ ಮೂರು ದಿನ ತಂಗಿದಾಗ ಗೋಪು ಅವಳನ್ನು ಹುಡುಕುತ್ತಿರುವ ಸಂಗತಿ ಎಲ್ಲಿಂದಲೂ ಕೇಳಿ ಬರಲಿಲ್ಲ. ಮನೆಗೆ ಮರಳಿದರೆ ಗೋಪು ಹೊಡೆದು ಬಡಿದು ಹಿಂಸಿಸುವುದು ಖಂಡಿತ, ಮೂರು ಮಕ್ಕಳೊಡನೆ ಕಮಲೆಯ ಮನೆಯಲ್ಲಿ ಎಷ್ಟು ದಿನ ಇರಲಾದೀತು?

ಇದು ಇಕ್ಕಟ್ಟಿನ ಪ್ರಸಂಗ.

"ಕಮಲಾ. ಈವೊಂದು ದಿನ ನೀನಾಗಲೀ, ಅಮ್ಮನಾಗಲೀ, ನನ್ನ ಜೊತೆ ಬರುವಷ್ಟು ಉಪಕಾರ ಮಾಡಿ. ಒಬ್ಬಳೇ ಹೋಗುವುದಕ್ಕೆ ಭಯ. ಗೋಪು ಮೂಳೆ ಮುರಿದು ಕೂರಿಸಿದರೇನು ಗತಿ? ಮಕ್ಕಳನ್ನೇನು ಮಾಡಲಿ? ಇಲ್ಲಿ ಇರಲೂ ಆರೆ; ಹೋಗಲೂ ಆರೆ."

"ಸರಿ; ಯಾರಾದರೂ ಬರೋಣ. ಕಷ್ಟಕ್ಕೆ ಆಗದಿರುವುದುಂಟೇ? ಅಮ್ಮ ಹೋದರೆ ಹಿರಿಯರು ಎಂದು ಗೌರವ ಕೊಟ್ಟಾನೆಯೇ ಏನು ಹೇಳುತ್ತಿ? ಇಲ್ಲವಾದರೆ ನಾನೇ ಬರುವೆ. ನೀನು ಹೇಗೆ ಹೇಳಿದರೆ ಹಾಗೆ."

"ಅಮ್ಮ ಬಂದರೆ ಒಳ್ಳೆಯದು. ಅವರನ್ನೇ ಕರೆದೊಯ್ಯುವೆ. ಅವರೊಂದು

ಮಾತು ಹೇಳಿದರೆ ಕೇಳಿಯಾನೇನೋ..”

“ಆಗಲಿ ಮೋಹಿನಿ! ನಾನೇ ಬರುವೆ. ಆವನು ನನಗೆ ಹೊಡೆಯುವುದಿಲ್ಲವಲ್ಲಾ?”

ಸಕ್ಕೂ ಸಿಟ್ಟಿನಿಂದ ಹೇಳಿದಳು “ ಈ ಸಲಿ ಅಪ್ಪ ಹೊಡೆದರೆ ನೆರಮನೆ ಅಂಕಲ್ ಕರೆತರುವೆ!”

“ಅವರೆಲ್ಲರಿಗೂ ಗೊತ್ತು. ಅಷ್ಟೇ ಅಲ್ಲ, ಎಲ್ಲರೂ ಒಂದೇ ದರ್ಜೆಯವರು. ಯಾರಿಗೂ ನೋವಿಲ್ಲ; ಕರುಣೆಯೂ ಇಲ್ಲ. ಇಂತಹವರು ಏನು ಸಹಾಯ ಮಾಡಿಯಾರು? ಸಹಾಯ ಕೋರುವುದೂ ವ್ಯರ್ಥ.” ಸಂಕಟದಿಂದ ಹೊರಬಿತ್ತು ಮೋಹಿನಿಯ ದನಿ.

“ನಿಜ,” ಎಂದಳು ತಾಯಿ.

ಸಕ್ಕೂ ಮುಖ ಖಿನ್ನವಾಯಿತು. ಏನೂ ಹೇಳಲಿಲ್ಲ. ಶಾಂತಿ ಒಂದು ಜೋಡಿ ಬಟ್ಟೆಗಳ ಸಹಿತ ಮೋಹಿನಿಯ ಜೊತೆ ಹೊರಟಳು. ಕಮಲಾ ರಸ್ತೆಯಂಚಿನವರೆಗೂ ಹೋಗಿ ಗೆಳತಿಯನ್ನು ಬೀಳ್ಕೊಟ್ಟಳು.

ಮೋಹಿನಿಯ ಬಳಗ ಬಸ್ಸು ಹಿಡಿಯಿತು. ಸುಮಾರು ಇಪ್ಪತ್ತು ನಿಮಿಷಗಳ ಪಯಣ ಮುಗಿಯುತ್ತಲೂ ಎದೆಯ ಮೃದಂಗ ಡಬಡಬ ಬಡಿದುಕೊಳ್ಳತೊಡಗಿತು. ಬೇರೆ ಎಲ್ಲಾದರೂ ಆಶ್ರಯ ಸಿಗುವಂತಿದ್ದರೆ ಈ ಮನೆ ಬೇಡವೇ ಬೇಡವಾಗಿತ್ತು. ಸರಕಾರ ಅಥವಾ ಸಮಾಜ ನಮ್ಮಂತಹ ದೀನ ದಲಿತರಿಗೆ ಆಶ್ರಮಗಳನ್ನು ತೆರೆದಿದ್ದರೆ ಅಥವಾ ಆರ್ಥಿಕ ಸ್ವಾತಂತ್ರ್ಯ ಅಥವಾ ವೈಯುಕ್ತಿಕ ಸ್ವಾತಂತ್ರ್ಯ ನೀಡಿದ್ದಿದ್ದರೆ ನಮಗೆ ಇಷ್ಟು ನೋವು ಇರುತ್ತಿರಲಿಲ್ಲ. ನಮ್ಮ ಬಾಳು ಎತ್ತಿನ ಬಾಳು ಎರಡೂ ಒಂದೇ....ಎನಿಸಿ ಕಣ್ಣುಗಳಲ್ಲಿ ನೀರಾಡಿತು.

ಬಸ್ ನಿಲ್ದಾಣದಿಂದ ಹತ್ತು ನಿಮಿಷ ನಡೆದರೆ ಪೋಲಿಸ್ ಕಾಲೋನಿ. ಮೂರು ದಿನಗಳಿಂದ ಕಾಣೆಯಾಗಿದ್ದ ಗೃಹಿಣಿ ಮಕ್ಕಳೊಡನೆ ಹಿಂತಿರುಗಿದಾಗ ನೆರೆ ಹೊರೆಯವರಿಗೆ ಎಲ್ಲಿಲ್ಲದ ಕುತೂಹಲ.

“ಏನು ಮೋಹಿನಿ, ನಿನ್ನೆ ಮೊನ್ನೆ ಕಾಣಲೇ ಇಲ್ಲವಲ್ಲಾ?”

“ಗೆಳತಿ ಮನೆಗೆ ಹೋಗಿದ್ದೆ.”

“ನೀನು ಹೊರ ಹೋದ ಮೇಲೆ ಗೋಪು ಬಂದು ಸೂಟ್ ಕೇಸ್

ತೆಗೆದುಕೊಂಡು ಹೋದ. ಅನಂತರ ಈವರೆವಿಗೂ ಬಂದಿಲ್ಲ."

ಮೋಹಿನಿ ಹಿಡಿದಿದ್ದ ಉಸಿರನ್ನೆಲ್ಲಾ ಒಮ್ಮೆಗೆ ಹೊರ ಬಿಟ್ಟು ಬೀಗ ತೆಗೆದು ಒಳ ಹೊಕ್ಕಳು. ಮೊದಲು ದೃಷ್ಟಿ ಬೀರುವಿನಲ್ಲಿದ್ದ ಸೂಟ್‌ಕೇಸ್ ಕಡೆಗೆ ಹರಿಯಿತು. ಅದು ಇರಲಿಲ್ಲ. ಹೃದಯ ಭಾರ ಇಳಿದು ಹೋದರೂ ತನುಮನಗಳಿಗೆ ಚಬಕಿನ ಏಟು ಬಿದ್ದಂತಾಗುತ್ತದೆ ಆ ನೋಟುಗಳ ನೆನವರಿಕೆ. ಖಿನ್ನ ಮನಸ್ಕಳಾಗಿ ಒಳಹೋಗುವುದರೊಳಗೆ ನೆರೆಮನೆಯ ಚಂದ್ರಿ ಒಳ ಬಂದು ಹೇಳಿದಳು "ಗೋಪಣ್ಣ ನನ್ನನ್ನು ಕೇಳಿದ ನೀನು ಎಲ್ಲಿಗೆ ಹೋಗಿದ್ದಿ? ಎಂದು. ನನಗೆ ತಿಳಿಯದು ಎಂದೆ. ಬಂದವನು ಹೆಚ್ಚು ಹೊತ್ತು ನಿಲ್ಲಲಿಲ್ಲ. ಹೊರಟು ಹೋದ. ಏಳು ಗಂಟೆ ಸಮಯದಲ್ಲಿ ಹೋಗಿದ್ದಾನೆ. ಬಹುಶಃ ರಾತ್ರಿಯ ಡ್ಯೂಟಿಗೆ ಹೋದನೋ ಏನೋ. ನೀನೇನೂ ಚಿಂತೆ ಮಾಡಬೇಡ....." ಎಂದಷ್ಟು ಹೇಳಿ ಹೊರ ಹೋದಳು.

ಎರಡು ವಾರಗಳ ಗ್ರಾಸವಿತ್ತು. ಸಧ್ಯ, ಅದರ ಚಿಂತೆಯಿಲ್ಲವಾದರೂ ಅದನ್ನು ಬಳಸುವುದೆಂದರೆ ವಿಷನುಂಗಿದಂತೆಯೇ. ಒಡಲೆಲ್ಲಾ ಸಂಕಟ, ತಲೆಯೆಲ್ಲಾ ಚಿಟ್ಟು ಹಿಡಿಸುವಷ್ಟು ಚಿಂತೆ. ಒಲೆ ಹಚ್ಚಲಾರದೇ ಹಚ್ಚುವಾಗ ಸಕ್ಕೂ ಮನೆಯನ್ನು ಗುಡಿಸಿ ಕಸ ಬಳಿದಳು.

ಮೋಹಿನಿ ಅಡಿಗೆ ಮಾಡಿ ಎಲ್ಲರಿಗೂ ಬಡಿಸಿ ತಾನೂ ಉಂಡಳು. ಒಂದೊಂದು ತುತ್ತಿಗೂ ಗಂಟಲು ಒತ್ತುವಷ್ಟು ಹಿಂಸ್ರಕ. "ಏನೇ ಆಗಲೀ, ಈ ಬಾಳ್ಸೆರೆಯಿಂದ ಬಿಡುಗಡೆ ಹೊಂದಲೇಬೇಕು ಎಂಬುದು ದೃಢವಾದ ಅಭಿಪ್ರಾಯ. ಕೈಯಲ್ಲಿ ಕಾಸಿಲ್ಲ; ಮೈಯಲ್ಲಿ ಒಡವೆಯೂ ಇಲ್ಲ. ಮುಂದಿನ ದಾರಿಯನ್ನು ಭಗವಂತನೇ ತೋರಿಸಬೇಕು....ಎಂದು ಮೊರೆಯಿಡುತ್ತದೆ ಹೃದಯ ಬನದ ಪಕ್ಷಿ. ಮುಂದಿನ ದಾರಿಗಾಗಿ ಸದಾ ಅರಸುತ್ತದೆ ಮಾನಸ ಚಕ್ಷು.

ಶಾಂತಿ ಕೇಳಿದಳು "ಬಾಲವಾಡಿ ಎಲ್ಲಿ ನಡೆಸಬೇಕೆಂದಿದ್ದಿ?"

"ಬಾಲವಾಡಿ ಸ್ಥಿರವಾಗಿ ತಳವೂರುವವರೆಗೆ ಇಲ್ಲಿಯೇ ನಡೆಸುವುದು ಒಳ್ಳೆಯದು. ಮೊದಲು ಸ್ಥಳ ಹುಡುಕಿಕೊಳ್ಳಬೇಕು. ಅನಂತರ ಮಕ್ಕಳ ಸಂಖ್ಯೆಯೆಷ್ಟು, ಯಾವ ವಯಸ್ಸಿನ ಮಕ್ಕಳು ಎಂಬುದರ ಪರಿಶೀಲನೆ ಮಾಡಿಕೊಂಡು ಮುಂದಿನ ಹೆಜ್ಜೆಯಿಡಬೇಕು. ಸುಮನಾ ಮತ್ತು ಕಮಲಾ

ಇಬ್ಬರೂ ಮನೆ ಹುಡುಕುವುದಾಗಿ ಹೇಳಿದ್ದಾರೆ. ಒಂದು ವೇಳೆ ಸಿಕ್ಕಿದ್ದರೆ ಈ ಸ್ಥಳ ಖಾಲಿ ಮಾಡುವೆ. ನನಗಂತೂ, ಈ ನರಕದಿಂದ ಪಾರಾದರೆ ಸಾಕು ಮೂರು ಹೆಣ್ಣು ಮಕ್ಕಳನ್ನು ತೀರ ಹಚ್ಚುವುದು ಸುಲಭವಲ್ಲ. ಹೊಟ್ಟೆಯಲ್ಲಿ ಮೂರು ತಿಂಗಳ ಭ್ರೂಣ...ಆಸ್ಪತ್ರೆಗೆ ಹೋಗಿ ತೆಗೆಸಿಕೊಳ್ಳಲೇ ಎನಿಸಿದೆ. ಈ ಮಕ್ಕಳನ್ನು ಸಾಕುವ ಭಾರ ಒಬ್ಬಳೇ ಹೊರುವುದು ತುಂಬಾ ಕಷ್ಟ. ಗಂಡಿನ ಸಹಾಯ ಸಹಕಾರ ಇಲ್ಲದೆ ಹೊಣೆಗಾರಿಕೆ ಹೊತ್ತುಕೊಳ್ಳುವುದು ಎಷ್ಟು ಕಷ್ಟ....ಭಗವಂತ ನನ್ನ ಜನ್ಮ ಜಾಲಾಡಿ ಬಿಟ್ಟ. ಹುಟ್ಟಿದಾರಭ್ಯ ಇದೇ ಗೋಳು. ಅಣ್ಣನ ಮಕ್ಕಳನ್ನು ಸಾಕಿ ಅನುಭವ ಇದ್ದರೂ ಈಗ ಮಗು ಬೇಡವೇ ಬೇಡ ಎನಿಸುತ್ತಿದೆ. ಗೋಪುವಿನ ಕೆಟ್ಟ ಚಾಳಿಯರಿಯದಿದ್ದ ಸಮಯದಲ್ಲಿ ಮಕ್ಕಳನ್ನು ಹೆತ್ತು ಸಲಹಿದೆ. ಈಗಿನ ಸಂದರ್ಭದಲ್ಲಿ ಇದು ಹೆಣ್ಣೇ ಆಗಲಿ ಗಂಡೇ ಆಗಲಿ ನನಗೆ ಬೇಡವೇ ಬೇಡ ಎನಿಸಿದೆ. ನನ್ನ ಪ್ರಾಣ ಹೋದರೂ ಚಿಂತಿಲ್ಲ. ತೆಗೆಸಿಕೊಳ್ಳೋಣ ಎಂಬಷ್ಟು ಅಸಹ್ಯ ಏನು ಮಾಡಲಿ ಹೇಳಿ? ನನಗೆ ಬದುಕೇ ಅಸಹ್ಯವಾಗಿದೆ. ಹೆಣ್ಣು ಮಕ್ಕಳಿದಿದ್ದರೆ ನಾನು ಖಂಡಿತ ಬದುಕಿರುತ್ತಲಿರಲಿಲ್ಲ. ದುರ್ವಿಧಿ ನನ್ನನ್ನು ಬಾಳಿಗೆ ಬಿಗಿಯಿತು...."

"ಬದುಕನ್ನು ರೂಪಿಸಿಕೊಳ್ಳುವುದು ನಮ್ಮಿಂದಾದಿತೇ? ನಾವೆಲ್ಲಿ? ದೈವ ಎಲ್ಲಿ?"

"ಆ ದೈವವೇ ನನಗೆ ದಾರಿ ತೋರಬೇಕು."

"ಹೌದು....ನೀನು ಅವನನ್ನೇ ಪ್ರಾರ್ಥಿಸು, ಅವನೇ ದಾರಿ ತೋರುತ್ತಾನೆ."

ಮೋಹಿನಿ ಮೌನವೇ ಉತ್ತರವಾಯಿತು. ಕಣ್ಣುಗಳಲ್ಲಿ ಕಂಬನಿ ಮೂಡಿ ಮುಖ ರಂಗು ತಳೆಯಿತು. ಅದನ್ನು ತೋರಗೊಡದಂತೆ ಮುಖವನ್ನು ಒರಿಸಿಕೊಳ್ಳುವ ನೆವದಲ್ಲಿ ಕಣ್ಣುಗಳನ್ನೂ ತೀಡಿಕೊಂಡಳು. ಶಾಂತಿಯ ಮನಸ್ಸು ಬಿಸಿಲಟ್ಟಿದ ಮಂಜಿನಂತಾಯಿತು. ಅವಳ ಬೆನ್ನನ್ನು ನೇವರಿಸುತ್ತ "ಮನಸ್ಸಿಗೆ ತೀರಾ ಹಚ್ಚಿಕೊಳ್ಳಬೇಡ. ಪ್ರಕೃತಿ ಹೇಗೆ ನಡೆಸುತ್ತೋ ಹಾಗೆ ನಡೆಯಲಿ. ಈಗ ನೀನಾಗಿ ಗರ್ಭಪಾತ ಮಾಡಿಸಿಕೊಂಡು ಜೀವನಕ್ಕೆ ಅಪಾಯ ಬಂದರೇನು ಗತಿ? ಮೂವರು ಹೆಣ್ಣು ಮಕ್ಕಳನ್ನು ತಬ್ಬಲಿ ಮಾಡಬೇಡ. ಈ ಮೂವರು ಮಕ್ಕಳೂ ಅವನ ಅಂಶವಲ್ಲವೇ?"

ದನಿ ಎದೆಯಾಳದಿಂದ ಹರಿದು ಬಂತು, ಕಾರುಣ್ಯರಸವೇ ಹರಿದು ಬಂದಂತೆ.

“ಅಮ್ಮ! ನನಗಾಗ ಅವನ ನೀಚತನ ತಿಳಿದಿರಲಿಲ್ಲ. ಆದುದು ಆಗಿ ಹೋಯಿತು. ಇನ್ನು....ಇನ್ನಾದರೂ ಈ ಪಾಪ ಪಂಕದಿಂದ ಹೊರಗುಳಿಯೋಣ ಎಂಬುದು ನನ್ನ ಇಚ್ಛೆ. ನಾವೊಂದು ನೆನೆದರೆ ದೈವವೊಂದು ನೆನೆಯಿತು ಎಂಬುದೂ ಸಹ ಸತ್ಯವೇ. ಏನಾದರಾಗಲಿ, ಪ್ರಯತ್ನ ನನ್ನದು.”

“ನಿನ್ನ ಇಷ್ಟ. ಅದಕ್ಕಿಂತ ಇನ್ನೇನು ಹೇಳಲಿ?”

“ನಾನು ಚಂದ್ರಿ ಜೊತೆ ಹೋಗಿ ಡಾಕ್ಟರನ್ನು ನೋಡಿ ಬರಲೇ? ನಿಮಗೆ ಮನೆಯಲ್ಲಿರಲು ಬೇಸರವಾಗುತ್ತದೆಯೇ?”

“ಏನಿಲ್ಲ ಹೋಗಿ ಬಾ. ನಾನು ವರ್ತಮಾನ ಪತ್ರಿಕೆ ಓದುತ್ತಿರುವೆ.”

ಮೋಹಿನಿ ಮಕ್ಕಳಿಗೂ ತಾಯಿಗೂ ಹೇಳಿಕೊಂಡು ಆಸ್ಪತ್ರೆಗೆ ಚಂದ್ರಿಯೊಡನೆ ಹೋದರೆ ತನ್ನ ಕಾಲೇಜಿನ ಸಹಪಾಟಿಯೇ ಅಲ್ಲಿನ ಡಾಕ್ಟರು. ಇಬ್ಬರೂ ಒಂದು ಗಳಿಗೆ ಪರಸ್ಪರ ಹುಬ್ಬೆತ್ತಿ ನೋಡಿದರೇನೋ.... ಗುರುತು ಹತ್ತಿದೊಡನೆಯೇ, ಪರಸ್ಪರ ಗಾಢಾಲಿಂಗನೆ ಮಾಡಿಕೊಂಡು ಕೆನ್ನೆಗೆ ಹೂ ಮುತ್ತನೊತ್ತಿದರು.

“ಮಮತಾ! ನೀನಿಲ್ಲಿರುವುದು ನನಗೆ ಗೊತ್ತೇ ಇಲ್ಲವಲ್ಲಾ? ಗೊತ್ತಿದ್ದರೆ ನಿನ್ನ ನೋಡುವ ಸಲುವಾಗಿಯಾದರೂ ಬರುತಿದ್ದೆ.”

“ನನಗೂ ಅಷ್ಟೆ ಮೋಹಿನಿ. ಕೆಲಸ–ಕೆಲಸ. ಬಿಡುವು ದೊರೆಯದಷ್ಟು ಕೆಲಸ. ಹಳಬರನ್ನು ನೆನೆಯುವಷ್ಟು ಸಮಯ – ಸಹನೆ ಎರಡೂ ಇರುವುದಿಲ್ಲ.”

“ಹೋಗಲಿ ಬಿಡು. ಈಗ ಪರಿಚಯವಾಯಿತಲ್ಲ. ಇನ್ನು ನನ್ನ ಕ್ಷೇಮ ನಿನಗೆ ಸೇರಿದ್ದು.”

“ಆಗಲಿ, ಬಾ ಮೋಹಿನಿ.”

ಅನಂತರ ತನ್ನ ಜೀವನ ಚರಿತ್ರೆಯನ್ನು ಸಂಕ್ಷಿಪ್ತವಾಗಿ ತಿಳಿಸಿದ ಮೋಹಿನಿ ತನ್ನ ಸಮಸ್ಯೆಗೆ ಪರಿಹಾರವೊದಗಿಸಲು ಕೇಳಿಕೊಂಡಳು. ಅವಳು ಕೇಳುವುದನ್ನೆಲ್ಲಾ ಕೇಳಿ “ನೀನು ಮುಂದೆ ಈ ಕೃತಿಯಿಂದಾಗಿ ಪರಿತಪಿಸುವುದಿಲ್ಲವೇ?”ಎಂದಳು, ಡಾ॥ ಮಮತಾ.

“ಇಲ್ಲ, ಮಮತಾ, ಖಂಡಿತಾ ಉಪಕಾರ ಮಾಡು.”

ಡಾ॥ ಮಮತಾ ಅವಳನ್ನು ಪರೀಕ್ಷಿಸಿ "ಆಗಲಿ, ನೀನು ಇಂದು ಇಲ್ಲಿಯೇ ಇರು. ನಾಳೆ ಬೆಳಿಗ್ಗೆ ಅಥವಾ ನಾಳೆ ಸಾಯಂಕಾಲ ನಾನೇ, ನಿನ್ನನ್ನು ಸುರಕ್ಷಿತವಾಗಿ ಮನೆಗೆ ಮುಟ್ಟಿಸುವೆ.

ಆ ಮಾತಿಗೆ ಒಪ್ಪಿದ ಮೋಹಿನಿ ಚಂದ್ರಿಗೆ ಮಕ್ಕಳನ್ನು ನೋಡಿ ಕೊಳ್ಳುವಂತೆ ತಿಳಿಸಿ ಅವಳನ್ನು ಬೀಳ್ಕೊಟ್ಟು, ತನ್ನನ್ನು ಗೆಳತಿಗೆ ಆನಂದದಿಂದ ಸಮರ್ಪಿಸಿಕೊಂಡಳು.

ಡಾ॥ ಮಮತಾ ಗೆಳತಿಯ ಕರುಣಾಜನಕ ಕತೆಯನ್ನು ಕೇಳಿ "ಮೋಹಿನಿ! ನಿನ್ನ ಸಂಕಟ ನಿಜವಾಗಿಯೂ ಅಂತರಂಗವನ್ನು ಮುಟ್ಟುತ್ತದೆ. ದೇವರು ಮುಂದೆ ಒಳ್ಳೆಯದನ್ನು ಮಾಡಲಿ."

"ನಿನ್ನಂತಹ ಆತ್ಮೀಯರಿಂದ ನಾನು ಇನ್ನೂ ಉಸಿರಾಡುತ್ತಿರುವೆ. ಮೇಲಾಗಿ, ಮೂರು ಜನ ಹೆಣ್ಣು ಮಕ್ಕಳನ್ನು ಹಾದಿಗೆ ಹಾಕಲು ಮನಸ್ಸು ಬರುವುದಿಲ್ಲ."

"ಮೋಹಿನಿ! ಇಂಥ ಹೀನ ಸಮಾಜವನ್ನು ಎದುರಿಸುವುದಲ್ಲೇ ಶ್ರೇಯಸ್ಸಿದೆ. ನೀನು ಎದೆಗೆಡಬೇಡ."

"ನಿನ್ನ ಒತ್ತಾಸೆ ಇದ್ದರೆ ಸಾಕು."

"ನನ್ನದಲ್ಲ, ಭಗವಂತನದು...ಅನಾಥೋ ದೈವ ರಕ್ಷಕಃ."

ಮರುದಿನ ಮೋಹಿನಿಯನ್ನು ಡಾ॥ ಮಮತಾ ತನ್ನ ಕಾರಿನಲ್ಲಿ ಕರೆತಂದು ಮನೆಗೆ ಬಿಟ್ಟಾಗೆ ಭಗವಾನ್ ಭಾಸ್ಕರ ಪಶ್ಚಿಮ ಘಟ್ಟಕೆ ಇಳಿಯುತಿದ್ದ. ಕೋಟಿ ಕೋಟಿ ಕಿರಣಗಳ ಸಾಂದ್ರ ನೊಂದ ಜೀವಕ್ಕೆ ಅಭಯ ಹಸ್ತವನ್ನು ತೋರುವ ಶೈಲಿಯಲ್ಲಿ ಅನುಭೂತವಾಗಿದೆ.

## ೧೦

ಕಮಲಾ-ಸುಮನಾ ಒಟ್ಟಾಗಿಯೇ ಬಾಲವಾಡಿಗಾಗಿ ಮನೆ ಹುಡುಕುವುದರಲ್ಲಿ ಮುಂದಾದರು. ಎಲ್ಲೆಲ್ಲಿ, ಯಾರ ಮೂಲಕ ಅಥವಾ

ಜಾಹೀರಾತುಗಳ ಮೂಲಕ ಎಷ್ಟೆಷ್ಟು ಸಾಧ್ಯವೋ ಅಷ್ಟು ಪ್ರಯತ್ನಿಸಿದರೂ ಪ್ರಯತ್ನ ಪ್ರಯತ್ನವಾಗಿಯೇ ಉಳಿಯಿತು. ಆದರೂ ಪ್ರಯತ್ನಕ್ಕೆ ಫಲ ಮೂಡಲಿಲ್ಲ. ಆದರೂ, ಪ್ರಯತ್ನ ಏಕಪ್ರಕಾರವಾಗಿ ನಡದೇ ಇತ್ತು.

ಅವರಿಬ್ಬರೂ ಆದಿನ ಸಂಜೆ ಮೋಹಿನಿಯನ್ನು ನೋಡಲು ಹೊರಟರು. ಬಸ್ಸು ಇಳಿದು ಮನೆ ಮುಟ್ಟದಾಗ ಸಂಜೆ ಆರರ ಸಮಯ. ಮೋಹಿನಿ ಮಕ್ಕಳಿಗೆ ಪಾಠ ಹೇಳುತ್ತಿದ್ದಳು. ಅವಳು ಸ್ವಲ್ಪ ಬಿಳಿಚಿಕೊಂಡಿದ್ದರೂ ಆರೋಗ್ಯ ಕೆಟ್ಟಿರಲಿಲ್ಲ. ಅವಳನ್ನು ನೋಡುತ್ತಲೂ ಕರುಣೆಯ ಕಟ್ಟೆ ಒಡೆಯಿತು.

"ಏನಮ್ಮಾ ಮೋಹಿನಿ! ಹೇಗಿದ್ದೀ?" ಅಲ್ಲಿಂದಲೇ ಕೇಳಿದಳು ಕಮಲಾ.

"ಬಿಳಿಚಿಕೊಂಡಿದ್ದೀಯೇ! ಟಾನಿಕ್ ತೆಗೆದುಕೊಳ್ಳುತ್ತಿದ್ದೀಯಾ? ಮತ್ತೆ ಡಾಕ್ಟರನ್ನು ಕಂಡೆಯಾ" ಸುಮನಳ ಪ್ರಶ್ನೆ.

ಗೆಳತಿಯರನ್ನು ಆತ್ಮೀಯತೆಯಿಂದ ಬರಮಾಡಿಕೊಂಡು ಉತ್ತರಿಸಿದಳು ಮೋಹಿನಿ.

"ಟಾನಿಕ್ ತೆಗೆದುಕೊಳ್ಳುತ್ತಿರುವೆ ಸುಧಾರಿಸಿಕೊಳ್ಳಲು ಸ್ವಲ್ಪ ಸಮಯ ಬೇಕಾಗಬಹುದು."

ಮೂವರು ಮಕ್ಕಳೂ ಪುಸ್ತಕಗಳ ಸಹಿತ ವರಾಂಡಕ್ಕೆ ಹೋದರು.

"ಡಾ|| ಮಮತಾ ಇಲ್ಲದಿದ್ದರೆ ಇದು ಇಷ್ಟು ಸುಲಭವಾಗಿ ಬಗೆ ಹರಿಯುತ್ತಿರಲಿಲ್ಲ. ಅವಳು ನನ್ನ ಕಾಲೇಜ್ ಗೆಳತಿ. ತುಂಬಾ ಮುತು ವರ್ಜಿಯಿಂದ ನೋಡಿಕೊಂಡಿದ್ದಾಳೆ. ನನಗೆ ಬೇಕಾದ ಔಷಧಿ, ಟಾನಿಕ್ ಎಲ್ಲಾ ಅವಳದೇ. ಮೂರು ದಿನ ಬಿಟ್ಟು ಬರಲು ಹೇಳಿದ್ದಾಳೆ. ಹೋಗಿ ಬರುವೆ."

"ದೈವ ಸಹಾಯ ಎಂದರೆ ಹೀಗೆಯೇ. ನಮ್ಮ ಸಂಕಷ್ಟಗಳು ಬಲಿಯುತ್ತಿರುವಾಗ ನಾವು ದೈವಕ್ಕೆ ಕರುಣೆಯಿಲ್ಲ ಎಂದುಕೊಳ್ಳುತ್ತೇವೆ. ಹೀಗೆ ಎಷ್ಟೆಷ್ಟೋ ಬಾರಿ ಪರೋಕ್ಷವಾಗಿ ಒದಗುವ ಸಹಾಯವನ್ನು ನಾವು ದೈವಾಯತ್ತವಾದುದು ಎಂದುಕೊಳ್ಳುವುದೇ ಇಲ್ಲ....."

"ಹೌದು ಸುಮನಾ!....ಅಲ್ಲದೆ ನಮ್ಮ ನಮ್ಮ ಕರ್ಮಾನುಸಾರವೇ ಈ ಬದುಕು. ನನ್ನ ಬಾಳು ಒಂದು ದಶಕದೊಳಗೇ ಹರಿದುಕೊಂಡಾಗ ದುರ್ವಿಧಿಯನ್ನು ದೂಷಿಸುತಿದ್ದೆ...ನಮ್ಮ ನಮ್ಮ ಋಣಾನು ಬಂಧವೇ

ಅಷ್ಟಿದ್ದಾಗ ಮಾಡುವುದೇನು?....ಈಗ ನಿಮ್ಮಿಬ್ಬರಿಗೂ ಜೀವನ ಭಾಗಿಗಳಿದ್ದೂ ಈ ಗತಿಯಾಯ್ತು? ಇದೆಲ್ಲಾ ನಮ್ಮ ನಮ್ಮ ಜನ್ಮಾಂತರ ಕರ್ಮ ಅಲ್ಲವೇ? ನಾವು ಏನು ಮಾಡಿದ್ದೇವೋ ಅದನ್ನು ಉಣ್ಣಲೇಬೇಕು. ನನ್ನ ಪತಿ ಕ್ಯಾಪ್ಟನ್ ಕಾಮೇಶ್ ಕುಡಿತದ ಚಟವಿದ್ದರೂ ಮಡದಿ ಮಕ್ಕಳನ್ನು ಅಲಕ್ಷಿಸಿದವನಲ್ಲ. ನನಗೆ ಆಗ ಬಹಳೇ ದುಃಖವಾಯ್ತು. ಮಾಡುವುದೇನು? ಎಷ್ಟು ಭಾಗ್ಯವೋ ಅಷ್ಟೇ ಲಭ್ಯ. ಆದ್ದರಿಂದ ಧೈರ್ಯಗೆಡುವುದು ಸರಿಯಲ್ಲ ಎಂಬುದನ್ನು ಅಂದೇ ಕಂಡುಕೊಂಡೆ...." "ಎಂದ ಕಮಲಾ ಪುನಃ "ಹೆಂಗರುಳು ಎಂಬುದು ಹೆಂಗರುಳಾಗಿಯೇ ಉಳಿದರೆ ಜೀವನದ ಹೆಬ್ಬಾಗಿಲು ಮುಚ್ಚಿಬಿಡುತ್ತದೆ. ಆದ್ದರಿಂದ ಧೈರ್ಯಂ ಸರ್ವತ್ರ ಸಾಧನಂ....ಎಂಬುದನ್ನು ಅಂದೇ ಕಂಡು ಕೊಂಡೆ. ಈಗ ನೀವಿಬ್ಬರೂ ತೆಗೆದುಕೊಳ್ಳುತ್ತಿರುವ ಕ್ರಮ ಕೂಡ ಸರಿಯಾದುದೇ. ಹೀಗೆ ಹಿಂಸೆಗೊಳಗಾದವರೆಲ್ಲಾ ತಮ್ಮ ಹೆಜ್ಜೆಯ ಮೇಲೆ ತಾವು ನಿಲ್ಲಬಲ್ಲವರಾದರೆ ಪ್ರಸ್ತುತ ನಡೆಯುತ್ತಿರುವ ಸ್ತ್ರೀಯರ ಸಾವು ನೋವುಗಳು ಖಂಡಿತ ಇರುತ್ತಿರಲಿಲ್ಲ. ಎಲ್ಲಿಂದ ಎಲ್ಲಿಯವರೆಗೂ ಆತ್ಮಹತ್ಯೆಗಳು, ಮಕ್ಕಳ ಸಹಿತ ಬಾವಿಗೆ ಹಾರುವುದು, ಮೈ ಸುಟ್ಟುಕೊಂಡು ಸಾಯುವುದು ಎಂತಹ ಭೀಭತ್ಸ! ಈಚೀಚೆಗೆ ಪತ್ರಿಕೆ ಓದುವುದೇ ಬೇಡ ಎನಿಸುತ್ತದೆ. ಅಬ್ಬಾ! ಈ ಜೀವನ ಎಷ್ಟು ಘೋರ? ಎಷ್ಟು ಹೃದಯ ವಿದ್ರಾಯಕ?"

ನೀಳವಾದ ನಿಟ್ಟುಸಿರೊಂದನ್ನು ಹೊರ ಹಾಕಿದಳು ಕಮಲ.

"ಹೌದು....ಸ್ತ್ರೀ ಸಮಾಜ ಸಂಪೂರ್ಣ ಎಚ್ಚೆತ್ತುಕೊಳ್ಳದಿದ್ದರೆ ಎಂದೆಂದಿಗೂ ಈ ಸಾವು ನೋವು ತಪ್ಪುವುದೇ ಇಲ್ಲ. ವಿದ್ಯಾಭ್ಯಾಸ ಪ್ರಚಲಿತವಾಗಿದೆ. ಸ್ತ್ರೀ ಸಂಘಗಳು ಹುಟ್ಟಿಕೊಂಡಿವೆ ಆದರೂ ಈ ಬೃಹದ್ ಸಮಾಜಕ್ಕೆ ಅದರ ಬಿಸಿ ತಾಗಿಯೇ ಇಲ್ಲ. ನಮ್ಮ ಬದುಕಿನಿಂದಾಚೆ ಉತ್ತಮ ಪ್ರಪಂಚವಿದೆಯೆಂದೂ, ಅದು ಸರಾಗವಾಗಿ ಉಸಿರಾಡುತ್ತಿದೆಯೆಂದೂ, ನವ ಚೈತನ್ಯ ತರಂಗಗಳು ಮುಗಿಲು ಮುಟ್ಟುತ್ತಿವೆಯೆಂದೂ ಊಹಿಸಿಕೊಳ್ಳದಿರುವುದು ನಮ್ಮವರ ದುರದೃಷ್ಟ. ಈ ಅಶಾಂತಿಯ ಬೆಂಕಿಯ ಜ್ವಾಲೆ ರಾಷ್ಟ್ರವ್ಯಾಪಿ ಯಾಗುತಿದ್ದರೂ ವರ್ತಮಾನ ಯುಗಧರ್ಮವೂ ದಮನ ನೀತಿಯ ಅಖಂಡ ಯಜ್ಞಕ್ಕೆ ಕೈ ಹಾಕಿಲ್ಲವಲ್ಲಾ, ಅದೇ ಸಂಕಟ. ಅದೇ ದುಃಖ."

ಸಮನಳ ವ್ಯಾಖ್ಯಾನಕ್ಕೆ ವಿಷಾದವಾಣಿಯಲ್ಲಿ ನುಡಿದಳು ಮೋಹಿನಿ.

"ಅಧಿಕಾರ ಪೀಠಸ್ಥರು ಪುರುಷವರ್ಗ. ಸ್ತ್ರೀ ದಾಸ್ಯ ಅವರಿಗೆ ಬೇಕೇ ಹೊರತು ಸ್ತ್ರೀ ಸ್ವಾತಂತ್ರ್ಯ ಯಾರಿಗೆ ಬೇಕು? ಕೇವಲ ಅಡ್ಡ ಗೋಡೆಯ ಮೇಲಿನ ದೀಪ, ಅಷ್ಟೆ."

ಯಾರದೋ ವೀಣೆಯ ತಂತಿ ತಮ್ಮ ಎದೆಯಲ್ಲಿ ವಿಷಾದ ಗೀತೆಯನ್ನು ಖಂಡಿಸಿದಂತಾಯಿತು. ಆ ಮುಹೂರ್ತದಲ್ಲಿ ಸ್ವಲ್ಪ ಹೊತ್ತು ಮೌನಮುದ್ರೆ ಆವರಿಸಿತು....ಯಾರಾದರೂ ಆತ್ಮೀಯರು ಮೃತಿ ಹೊಂದಿದರೆ ಅಳುವಷ್ಟು ಹೊತ್ತು ಅತ್ತು ಅನಂತರ ವೇದಾಂತ ಹೇಳುವಂತೆ ತಮಗೆ ತಾವೇ ಸಮಾಧಾನಮಾಡಿಕೊಳ್ಳುವಂತಾಯಿತು.

"ಆದರೇನು? ನಮ್ಮಲ್ಲಿರುವ ಮಾನವತೆ, ಧರ್ಮ, ಪ್ರಾಣಶಕ್ತಿಗಳು ಸದಾಕಾಲ ನೀವು ಮನೀಷಿ ಎಂದೇ ಹೇಳುತ್ತಿರುತ್ತವೆ. ಮಾನವೀಯ ಉತ್ತಮ ಸಂಕಲ್ಪ ಎಂದೂ ರಹಸ್ಯವಾಗಿರುವುದಿಲ್ಲ. ಅರ್ಥಭರಿತವಾದ ಜೀವನ ಪ್ರೇಮಕ್ಕಿಂತ ವಿಭಿನ್ನವಾದ ಜೀವನ ಜ್ವಾಲೆಯಲ್ಲಿ ಪಡೆಯುವ ಮಹಾನುಭೂತಿ ಅಲ್ಪವೇನಲ್ಲ...ಸ್ನೇಹ–ಪ್ರೇಮ–ಕಂಬನಿಗಳಿಂದ ತುಳುಕಾಡುವ ನಾರಿಯ ಅಂತರಂಗ ಇವು ಚಂದ್ರೋದಯದಂತೆ ಶಾಂತಿಯುಳ್ಳವು. ಆದರೆ, ಎಲ್ಲರ ಹೃದಯ ಆ ಸ್ಥಿತಿಯನ್ನು ಗುರುತಿಸಲಾರವು. ಅದೇ ದುಃಖಕರ....

ಸುಮನಾಳ ವಾಕ್ಯ ಸರಣಿ ಅಲ್ಲಿಗೆ ಬಂದು ನಿಂತು ಹೋಯಿತು.

"ಇದೆಲ್ಲಾ ಸರಿಯೆ. ಈ ಜೀವನ ಧ್ಯೇಯ ಏನೆಂಬುದನ್ನು ಬಹುಶಃ ನಾವು ಕೊನೆಯವರೆಗೂ ನಿರ್ಧರಿಸಲಾರೆವೊ ಏನೋ....ನಮ್ಮದು ಇನ್ನೂ ತೀರಾ ಬಾಲಿಶ. ಚಿಗರಿಗಿಂತಲೂ ಚಿಗುರು. ನಾವು ಅರಿತು–ನುರಿತು ತಿಳಿಯುವ ವೇಳೆಗೆ ಈ ಜೀವನವೇ ಮುಗಿದು ಹೋಗಿರುತ್ತದೆ."

ಆ ಕಠೋರ ಹಾಸ್ಯವನ್ನು ಕೇಳಿ ಸುದತಿಯರ ಮಾನಸ ಪ್ರಕೃತಿ ಸ್ಥಬ್ದಗೊಂಡಿತು.

ಸ್ವಲ್ಪ ಹೊತ್ತು ಸದ್ದಿಲ್ಲದೆ ಉರುಳಿಹೋಯಿತು.

ಮೋಹನಿ ಯೋಚನಾಕ್ರಾಂತಳಾಗಿ ನುಡಿದಳು–"ನಮ್ಮ ಸಮಾಜ ವ್ಯವಸ್ಥೆಯ ಅತೀ ಕಲುಷಿತ ಪದ್ಧತಿಗೆ ನಾವು–ಸ್ತ್ರೀ ಜನಾಂಗ ಭಾಗಶಃ ಕಾರಣ ಎನಲೇಬೇಕು. ನಾವು ಸರ್ವತ್ರ ಬೌದ್ಧಿಕ ಸ್ತರದಲ್ಲಿ ಮಿಂದೇಳಲಿಲ್ಲ. ನಾವು ಆಸ್ತಿಯ ಹಕ್ಕು ಅಥವಾ ವೈಯುಕ್ತಿಕ ಸ್ವಾತಂತ್ರ್ಯ ಅಥವಾ ಆರ್ಥಿಕ

ಸ್ವಾತಂತ್ರ್ಯಗಳನ್ನು ಪಡೆಯುವಷ್ಟು ಸ್ವಾಯತ್ತತೆಯನ್ನು ಪಡೆಯದೆ ಇರುವುದು. ಶ್ರೀಮತಿ ಸರೋಜಿನಿ ನಾಯ್ಡು ಸ್ವಾತಂತ್ರ್ಯಪೂರ್ವವೇ ಇಂಗ್ಲೆಡ್‌ನಲ್ಲಿ ವರಿಷ್ಟರ ಮುಂದೆ ಸ್ತ್ರೀಯರ ಹಕ್ಕು ಬಾಧ್ಯತೆಗಾಗಿ ಕಂಠಶೋಷಣೆ ಮಾಡಿದರು. ಡಾ॥ ಆ್ಯನಿಬೆಸೆಂಟ್ ಮತ್ತು ಸಿಸ್ಟರ್ ನಿವೇದಿತಾರವರಂಥವರು ತಮ್ಮ ಜನ್ಮ ಭೂಮಿಯನ್ನು ಮರೆತು ಭಾರತಕ್ಕೆ ಸರ್ವಾಂಗೀಣವಾಗಿ ದುಡಿದು ಇಲ್ಲಿಯೇ ಮಣ್ಣಾದರು. ನಮ್ಮವರು ಅವರ ಲಾಭವನ್ನು ಎಷ್ಟರ ಮಟ್ಟಿಗೆ ಪಡೆದುಕೊಂಡರು ಯೋಚನೆ ಮಾಡಿ.ನಾವು 'ನಮ್ಮನ್ನು' ಬೆಳೆಸಿಕೊಳ್ಳಬೇಕಾದರೆ ಒಡವೆ ವಸ್ತುಗಳ ವ್ಯಾಮೋಹ ಬದಿಗಿಡಬೇಕು....ವೇದ ಕಾಲೀನ ಭರ್ತೃಹರಿ ಒಮ್ಮೆ ಹೀಗೆಂದಿದ್ದಾನೆ.

ಶ್ರೋತ್ರಂ ಶ್ರುತೇನೈವ ನ ಕುಂಡಲೇನ ದಾನೇನ ಪಾಣಿರ್ನತು ಕಂಕಣೇನ।
ಆಭಾತಿ ಕಾಯಃ ಕರುಣಾ ಪರಾಣಾಂ ಪರೋಪಕಾರೇಣ ನ ಚಂದನೇನ॥

ಕಮಲಾ–ಸುಮನಾ ಸಮಾಧಾನ ಪೂರ್ವಕವಾಗಿ ತಲೆದೂಗಿದರು.

"ಹೋಗಲಿ, ಬಿಡು. ಸುಧಾರಣೆ ಜಡ ಭಾರತ ಎಚ್ಚೆತ್ತು ಕೊಂಡನಂತರ.

"ಗೋಪು ಸುದ್ದಿ ತಿಳಿದು ಬಂತೇ?"

"ಇಲ್ಲವೇ ಇಲ್ಲ." ಗೋಣು ಆಡಿಸಿದಳು ಮೋಹಿನಿ.

"ಕೈ ತುಂಬಾ ದುಡ್ಡು ಸಿಕ್ಕಿದೆ. ಎಲ್ಲೋ ಪರಾರಿ ಆಗಿದ್ದಾನೆ." ಹುಬ್ಬೇರಿಸಿದಳು ಕಮಲಾ.

"ಆದಿನ ರಾತ್ರಿ ಡ್ಯೂಟಿಗಾಗಿ ಕಳಿಸಿದ್ದರಂತೆ. ಅನಂತರ ಅವನನ್ನು ಕಂಡವರಿಲ್ಲ."

"ಹೋದರೆ ಹೋದ. ಅದೂ ಇನ್ನೂ ಒಳ್ಳೆಯದೇ. ಪಾಪಿ ಜನ್ಮ ಇದ್ದರೇನು ಇಲ್ಲದಿದ್ದರೇನು?"

ಮೋಹಿನಿಯ ಮೌನವೇ ಉತ್ತರವಾಯಿತು. ಕಣ್ಣುಗಳಲ್ಲಿ ಸಣ್ಣಗೆ ನೀರಾಡಿತು

"ಮೋಹಿನಿ, ನೀನಿರುವ ಸ್ಥಿತಿಯಲ್ಲಿ ಮನಸ್ಸಿಗೆ ಏನೇನೂ ಹಚ್ಚಿಕೊಳ್ಳ ಬಾರದು. ನಿನಗೀಗ ಮಾನಸಿಕ ವಿಶ್ರಾಂತಿ–ದೈಹಿಕ ವಿಶ್ರಾಂತಿ–ಎರಡೂ ಅಗತ್ಯ," ಸಂತೈಸಿದಳು ಸುಮನಾ.

"ನನ್ನ ಕಣ್ಣೀರು ಕಷ್ಟದ ಬಗ್ಗೆ ಅಲ್ಲ. ಈ ಅನೀತಿ–ಅನ್ಯಾಯ ದೌರ್ಜನ್ಯ–

ಅಧರ್ಮ-ಅಸತ್ಯಗಳ ಬಗ್ಗೆ. ಈ ಸಮಾಜದಲ್ಲಿ ನಾವು ಎಲ್ಲಿದ್ದರೂ ಎಲ್ಲಿಗೆ ಹೋದರೂ ಮಾನಸಿಕ ಶಾಂತಿ ಅಲಭ್ಯ. ನಮ್ಮ ದೈಹಿಕ ದೌರ್ಬಲ್ಯದಿಂದ ನಾವು ಸ್ವರಕ್ಷಣೆ ಮಾಡಿಕೊಳ್ಳುವುದು ಕಷ್ಟವೇ....ಆರಕ್ಷಕರೇ ಭಕ್ಷಕರಾಗಿರುವ ಪರಿಸ್ಥಿತಿಯಲ್ಲಿ ನಮ್ಮ ಜೀವನೊದ್ಧಾರ ಹೇಗೆ? ಎಲ್ಲಿ ನೋಡಿದರೂ ಮಾನಸಿಕ ಕೊಲೆ-ಬೌದ್ಧಿಕ ಕೊಲೆ-ದೈಹಿಕ ಕೊಲೆಗಳು ಚಿತ್ರ ವಿಚಿತ್ರ ರೂಪಕಗಳಾಗಿವೆ.

"ರಾಷ್ಟ್ರ ಸ್ವಾತಂತ್ರ್ಯಕ್ಕಾಗಿ ರಾಷ್ಟ್ರವ್ಯಾಪೀ ಚಳುವಳಿಯಲ್ಲಿ ಸ್ತ್ರೀಯರನ್ನು ಒಮ್ಮನದಿಂದ ಉಪಯೋಗಿಸಿಕೊಂಡ ಪುರುಷವರ್ಗ ರಾಷ್ಟ್ರಕ್ಕೆ ಸ್ವಾತಂತ್ರ್ಯ ಬಂದದ್ದೇ ತಡ ಸ್ತ್ರೀಯರನ್ನು ಸಂಪೂರ್ಣ ಕಡೆಗಣಿಸಿತು. ಅನಂತರ ಅವರು ಎಂದಿನ ತೊತ್ತುಗಳೇ! ಇದನ್ನು ಸ್ತ್ರೀಯರು ಅರಿತು ಕೊಂಡಿದ್ದಾರೆಯೇ? ಪುರುಷವರ್ಗವನ್ನು ರಾಜಕೀಯ ಸಂತ್ರಸ್ತರೆಂದು ಗುರುತಿಸಿದ ಸರಕಾರ ಸ್ತ್ರೀಯರನ್ನೇಕೆ ಕೈಬಿಟ್ಟಿತು? ನಾವು ಹೀಗಿರುವುದರಿಂದಲೇ ಎಂದೆಂದಿಗೂ ಯಾವ ಸಾಧನೆಯೂ ಆಗುವುದಿಲ್ಲ."

ದನಿಯಲ್ಲಿ ಆತ್ಮ ಸಂಕಟದ ಝುರಿಯೇ ಹರಿದುಬಂತು.

"ಅದಕ್ಕೆಲ್ಲಾ ಸಮಾಜ ಪಿತೃಗಳೇ ಬಹಳ ಮಟ್ಟಿಗೆ ಕಾರಣ. ಶಾಸ್ತ್ರಗಳ ಸಂಕೋಲೆ ತೊಡಿಸಿ, ಮಂಗಳ ದ್ರವ್ಯಗಳ ಹುಚ್ಚು ಹಿಡಿಸಿ. ಮುಗ್ಧ ಮನಕ್ಕೆ ಪುರಾಣ ದೇವಿಯರ ಕಥೆ ಹೇಳಿ ಮೂಲೆಗೆ ಕೂರಿಸಿದ್ದಾರೆ. ಲೋಕದೃಷ್ಟಿಯಲ್ಲಿ ಸ್ತ್ರೀಗೆ ಗೌರವ. ಒಳಗಡೆ ಮುಳ್ಳಿನ ಪಂಕ. ಅಬಲತೆಯ ನೇಮದಲ್ಲಿ-ಗೌರವದ ನೇಮದಲ್ಲಿ-ರಕ್ಷಣೆ ನೇಮದಲ್ಲಿ ನಾಲ್ಕು ಗೋಡೆಗಳ ಭದ್ರಕೋಟೆ ....ಇದೆಲ್ಲಾ ಸಾಮಾನ್ಯರಿಂದ ಸರಿಪಡಿಸುವುದು ಅಸಾಧ್ಯ. ಆದ್ದರಿಂದ ಯಾರ್ಯಾರು ಜ್ಞಾನ ಚಕ್ಷುವನ್ನು ತೆರೆಯ ಬಲ್ಲರೋ ಅವರಾದರೂ ದೂರ ಗಮ್ಯದ ಜಾಡು ಹಿಡಿದು ತಮ್ಮ ಹಿಂಬಾಲಕರನ್ನು ಮುನ್ನಡೆಸಬಲ್ಲರಾದರೆ ಕಿಂಚಿತ್ ಒಳ್ಳಿತಾದೀತು. ಅಂತೂ ಈ ಅಖಂಡ ಯಜ್ಞಕ್ಕೆ ನಮ್ಮಂತೆ ಬಾಳು ಹರಿದುಕೊಂಡವರು ಮಾತ್ರ ಸಿದ್ಧರಾಗಬಲ್ಲರೇನೋ...." ಸಣ್ಣಗೆ ಮುಗುಳು ನಕ್ಕಳು ಕಮಲ.

"ಕಮಲಾ! ನಿನ್ನ ಮಾತು ಅಕ್ಷರಶಃ ಸತ್ಯ. ನಾವು ಒಳಗಣ್ಣು ತೆರೆಯದೆ ಯಾವ ಕಾರ್ಯ ಸಾಧನೆಯೂ ಆಗದು. ಇಂದಿನ ಪಠ್ಯಕ್ರಮ-ವಿದ್ಯಾ ಸಂಸ್ಕಾರ-ಜೀವನ ಧೋರಣೆ ಎಲ್ಲವೂ ಪೆಣ್ಗೊಲೆಗಾಗಿಯೇ ನಿರ್ಮಿತವಾಗಿವೆ

ಎಂದರೆ ತಪ್ಪಾಗಲಾರದೇನೋ....ಆದರಿಂದಲೇ ನಮ್ಮ ಸಮಾಜ ಇನ್ನೂ ಕುಂಟು–ಕುರುಡು."

"ಸರಿ. ಮುಂದೇನು ಪರಿಹಾರ ಹೇಳಿ? ಸಾಮಾಜಿಕ ಸುಧಾರಣೆ ಅಷ್ಟು ಸುಲಭವಲ್ಲ. ಮಹಿಳಾ ಸಂಘಗಳ ಮೂಲಕ ಎಷ್ಟೆಷ್ಟೋ ಕೆಲಸ ನಡೆಯುತ್ತಿದೆ. ಎಷ್ಟು ಮಾಡಿದರೂ ಸಮುದ್ರಕ್ಕೆ ಶ್ರೀಗಂಧ ತೇಯ್ದಂತೆ ಎಂದರೂ ತಪ್ಪಲ್ಲ. ಅಂತೂ, ನಮ್ಮ ಸುಧಾರಣೆಗೆ ಎಷ್ಟು ಶತಮಾನಗಳು ಬೇಕೋ....ದೇವರೇ ಬಲ್ಲ!" ಮತ್ತೆ ವಿಷಾದವಾಣಿಯಲ್ಲಿ ನುಡಿದಳು ಮೋಹಿನಿ.

ಕಮಲಾ ನಕ್ಕು ನುಡಿದಳು "ದಾಸ್ಯವ್ರತ–ಸುಮಂಗಳತ್ವ ಇವುಗಳಿಗೇಕೆ ಬೆಲೆ ಕೊಡಬೇಕು? ಸಮಾಜ ಸುಧಾರಣೆಗಿಂತ ಇವು ಮಹತ್ವದ ವಿಷಯಗಳಲ್ಲ! ಎಲ್ಲವೂ ಅವರವರ ಮಾನಸಿಕ ಪರಿಧಿಗೆ ಸೇರಿದ್ದು. ಇದರ ಮೇಲೆ ಬಲತ್ಕಾರದ ಮಾಘಸ್ನಾನ ಏನೇನೂ ಸರಿಯಲ್ಲ. ಯಾರ್ಯಾರಿಗೆ ಏನೇನು ಇಷ್ಟವೋ ಅದನ್ನು ರೂಪಿಸಿಕೊಳ್ಳಲು ವೈಯುಕ್ತಿಕ ಸ್ವಾತಂತ್ರ್ಯ ಇರಲೇಬೇಕು. ಅಂದರೆ, ಅದರ ಮೂಲಕ ಜ್ಞಾನ ಚಕ್ಷು ತೆರೆಯಲು ಅವಕಾಶ ದೊರೆತರೆ ಒಳ್ಳೆಯದು."

ಆದರೆ, ಇದಕ್ಕೆಲ್ಲಾ ಬದ್ಧಳಾಗಲು ಒಪ್ಪಿಕೊಂಡಿರುವುದು ಹೆಣ್ಣಿನ ಮೂರ್ಖತನವಲ್ಲವೇ? ಕಿವಿ–ಮೂಗುಗಳನ್ನು ಚುಚ್ಚಿ ವಿರೂಪಹೊಂದಿ ಅಸಹ್ಯ ಕರವಾದ ಚಿನ್ನದ ಒಡವೆಗಳನ್ನು ಹೇರಿಕೊಳ್ಳುವುದು ಹೆಣ್ಣಿನ ಮುಗ್ಧತೆ ಎನ್ನುವುದಕ್ಕಿಂತ ಮಾನಸಿಕ ಅನಾರೋಗ್ಯ ಎನ್ನಬಹುದೋ ಅಥವಾ ಮತಿಮೌಢ್ಯ ಎನ್ನಬಹುದೋ, ತಿಳಿಯದು. ಇದು ತುಲನಾತ್ಮಕವಾದ ವಿಚಾರ

"ಸರಿ, ಈ ಕಡೆ ನಮ್ಮವರ ದೃಷ್ಟಿ ಹರಿಯದಿರುವುದು ವಿಷಾದಕರ,."

"ಈ ಇಪ್ಪತ್ತನೇ ಶತಮಾನದ ಸಂಧ್ಯೆಯಲ್ಲೂ ನಾವು ಹೀಗಿದ್ದರೆ ತಪ್ಪು ನಮ್ಮದೇ!"

"ಧರ್ಮವೇತ್ತೃಗಳೂ, ಮಠ ಸಂಸ್ಥಾಪಕರೂ ಮುಂದೆ ನಿಂತರೆ ಸ್ವಲ್ಪ ಲಘುವಾದೀತೇನೋ. ಯಾರಿಗೂ ಇದು ಬೇಕಾಗಿಯೇ ಇಲ್ಲ. ಸ್ತ್ರೀದಾಸ್ಯದಿಂದ ಬಹುಮುಖ ಲಾಭ! ಇದನ್ನು ಬಿಟ್ಟುಕೊಡಲು ಯಾರು ತಯಾರಿದ್ದಾರೆ?"

"ಈ ಚರ್ಚೆ ನಮ್ಮ ನಮ್ಮೊಳಗೆ ಮಾತ್ರವಷ್ಟೆ? ಇದರ ಪ್ರಶ್ನೋತ್ತರಗಳಿಂದ ಅಥವಾ ಉಪದೇಶಗಳಿಂದ ಒಂದು ಹುಲ್ಲು ಕಣೆಯೂ ಅಲುಗದೇನೋ ಎಂಬಷ್ಟು ಜಡವಾಗಿದೆ ಭಾರತ. ಅಂದಮೇಲೆ, ಒಬ್ಬಿಬ್ಬರು ಎಚ್ಚೆತ್ತು

ಮಾಡುವುದೇನು? ಪ್ರಾಯಶಃ ನಾವು ನಮ್ಮ ಪರಿಸರವನ್ನೂ ಜಡನಿದ್ದೆಯಿಂದ ಎಬ್ಬಿಸಲಾರೆವೂ ಏನೋ....ಪರಿಸ್ಥಿತಿ ಹೀಗಿರುವುದು ವಿಷಾದಕರ. ಪಾಶ್ಚಾತ್ಯರನ್ನು ನೋಡಿಯಾದರೂ ನಮ್ಮವರು ಕಲಿಯಬಾರದೇ? ಎನಿಸುತ್ತದೆ ಅನೇಕ ವೇಳೆ."

"ಒಂದು ವೇಳೆ, ವಿದೇಶೀಯರು ನಮ್ಮ ದೇಶಕ್ಕೆ ಪದಾರ್ಪಣೆ ಮಾಡದಿದ್ದರೆ ಈ ದೇಶ ಯಾವ ಸ್ಥಿತಿಯಲ್ಲಿರುತಿತ್ತು ಹೇಳು? ವೇದ ಸಂಸ್ಕೃತಿಯ ಮಹತ್ವ ವಿಶ್ವಕ್ಕೆ ಹಿರಿದು. ಸ್ತ್ರೀ ದಮನ ಪ್ರವೃತ್ತಿ. ಔದ್ಯಮಿಕ ಪಾತ್ರದಲ್ಲಿ, ನಾಗರಿಕ ವಿಶೇಷದಲ್ಲಿ ಹಿಂದೆ, ಹೀಗಿದೆ ನಮ್ಮ ಪರಿಸ್ಥಿತಿ."

"ಇಲ್ಲಿನ ಸ್ತ್ರೀದಮನ ವಿಶ್ವ ನಾಗರಿಕ ಪ್ರಜ್ಞೆಗೆ ಇನ್ನೂ ಮುಟ್ಟಿಲ್ಲವೇನೋ....ಮುಟ್ಟಿದ್ದಿದ್ದರೆ ಯಾವುದಾದರೊಂದು ಪರಿಹಾರ ದೊರೆಯುತಿತ್ತು."

"ನರಿಯ ಕೂಗು ಗಿರಿಗೆ ಎನ್ನುತ್ತಾರೆ. ಶಿಖರಕ್ಕೆ ಮುಟ್ಟಿಯೇ ಏನಾದರೂ ಆಗಬೇಕಾದರೆ...ನಾವು ಮೂಕ ಮೌನಿಗಳು. ಅತ್ಯಂತ ಕಷ್ಟ ಸಹಿಷ್ಣುಗಳು. ಧರ್ಮವೇತ್ತರು. ಅಂತಲೇ ನಮ್ಮ ಪಟ್ಟ ನಮಗೆ ಭದ್ರವಾಗಿ ಉಳಿದಿದೆ!"

ಆ ಕೂಡಲೇ ಎಲ್ಲರ ಮುಖದಲ್ಲಿ ನಗುವಿನಲೆ ಉಕ್ಕಿ ಹರಿಯಿತು.

"ನಾವೀಗ ಈ ತಾಣದಲ್ಲಿ ಬಾಲವಾಡಿಗೆ ಎಷ್ಟು ಮಂದಿ ಮಕ್ಕಳು ದೊರೆಯಬಹುದು ನೋಡಿಕೊಂಡು ಬರೋಣ. ಆಯಿತೇ?"

"ಆಗಲಿ, ನಾವು ಬಂದುದಕ್ಕೆ ಸ್ವಾಮಿಕಾರ್ಯ-ಸ್ವಕಾರ್ಯ ಎರಡೂ ಆಗಲಿ."

ಮೋಹಿನಿ ಏಳುತ್ತಲೂ "ನೀನು ಮನೆಯಲ್ಲಿದ್ದು ವಿಶ್ರಾಂತಿ ಪಡೆಯುವು ದಾದರೆ ಒಳ್ಳೆಯದು. ನಾವಿಬ್ಬರೇ ಹೋಗಿಬರುತ್ತೇವೆ. ಆಯಿತೇ?"

"ಪರವಾಯಿಲ್ಲ; ನಾನೂ ಬರುವೆ. ಒಟ್ಟಿಗೆ ಹೋಗಿ ಬರೋಣ."

ಮೂವರೂ ಹೊರಬಿದ್ದರು. ಸಾಲು ಮನೆಗಳ ನಾಲ್ಕು ಸಾಲುಗಳು. ಮನೆ ಮನೆಯನ್ನೂ ಹೊಕ್ಕು ಬಾಲವಾಡಿಯ ಮಕ್ಕಳನ್ನು ಗುರುತಿಸಿ, ಕಳುಹಿಸಲೊಪ್ಪಿದವರ ವಿಳಾಸ, ಮಗುವಿನ ಹೆಸರು ಕ್ರಮವಾಗಿ ಬರೆದುಕೊಳ್ಳುತ್ತ ಎಲ್ಲಾ ಮೆಟ್ಟಿಲನ್ನೂ ಹತ್ತಿ ಇಳಿದರು. ಪಟ್ಟಿಯಲ್ಲಿ ಮೂವತ್ತಾರು ಮಕ್ಕಳ ಹೆಸರು ಸೇರ್ಪಡೆಯಾಯಿತು. ಬಾಲವಾಡಿ ಸರಿಯಾಗಿ ನಡೆದರೆ ಇನ್ನೂ

ಹತ್ತಾರು ಮಕ್ಕಳು ಲಭ್ಯ ಎಂಬುದು ಮನವರಿಕೆಯಾದುದರಿಂದ ಮೂವರಿಗೂ ಆತ್ಮವಿಶ್ವಾಸ ಮೂಡಿಸುವಷ್ಟು ಹಿತ.

"ಈಗ ಹೇಗೂ ಗೋಪು ಇಲ್ಲ. ಈ ಮನೆಯಲ್ಲೇ ಶುರುಮಾಡುವ ಯಾದರೆ ಕೊಠಡಿ ಸಿಕ್ಕಿದನಂತರ ಬೇರೆಡೆಗೆ ವರ್ಗಾಯಿಸಬಹುದು."

"ಗೋಪು ಬೇಗ ಹಿಂತಿರುಗಿದರೆ ಕಷ್ಟವಾದೀತು. ಪೋಲೀಸ್ ಸಂಘದ ಕಟ್ಟಡದಲ್ಲಿ ಒಂದು ಕೊಠಡಿ ಸಿಗಬಹುದು. ಅದರ ಸಂಚಾಲಕರಿಂದ ಕೇಳಿತಿಳಿಯುವೆ."

"ಹಾಗೇ ಮಾಡು."

"ನಮಗೆ ತಿಳಿಯುವ ಬಗೆ?"

"ಕಾಗದ ಬರೆಯುವೆ."

"ಈಗ ಅಗತ್ಯವಾದ ಆಟಿಕೆಗಳನ್ನು ಕೊಳ್ಳಬೇಕು. ಪುಟ್ಟ ಪುಟ್ಟ ಕುರ್ಚಿಗಳು ಡೆಸ್ಕುಗಳು ಬಣ್ಣದ ಪೆನ್ಸಿಲ್ಲುಗಳು, ಸ್ಲೇಟುಗಳು ಎಲ್ಲಾಬೇಕು. ಪ್ಲೇಟು ಲೋಟಗಳು ಬಿಸ್ಕತು ಹಾಲು ಎಲ್ಲಕ್ಕೂ ಎಷ್ಟು ಹಣ ತಗಲುತ್ತೋ ಅದನ್ನೆಲ್ಲಾ ಲೆಕ್ಕಹಾಕಿ ಫೀಯನ್ನು ನಿಗದಿಗೊಳಿಸಬೇಕು. ಈಗ ಎಲ್ಲರದೂ ಬರಿಗೈ. ಹಣಕ್ಕೇನು ಮಾಡೋಣ?"

"ಬೇಕರಿ ಯಜಮಾನರಿಂದ ಸ್ವಲ್ಪ ಹಣ ತೆಗೆದುಕೊಳ್ಳಬಲ್ಲೆ. ನೀವಿಬ್ಬರೂ ಹಾಗೆಯೇ ನಿಮ್ಮ ನಿಮ್ಮ ಕಡೆಯಿಂದ ಎಷ್ಟಾಗುತ್ತೋ ಎಷ್ಟು ಹಣ ಪಡೆಯಬಹುದೋ ನೋಡಿ. ಹಣವಿಲ್ಲದೆ ಏನೂ ಮಾಡಲಾಗುವುದಿಲ್ಲ."

"ಅದೂ ನಿಜ."

ಮೂವರೂ ಸ್ವಲ್ಪ ಹೊತ್ತು ಪರ್ಯಾಲೋಚಿಸಿದ ನಂತರ ಅವರಿಬ್ಬರೂ ಹೊರಟರು.

ಮೋಹಿನಿ ಕೈಗೊಂದು ವರ್ತಮಾನ ಪತ್ರಿಕೆಯನ್ನು ತೆಗೆದುಕೊಂಡಳು. ಎಲ್ಲಿ, ಯಾವಕಡೆ ಕಣ್ಣಾಡಿಸಿದರೂ ಸಾವು-ನೋವುಗಳ ಪ್ರಸಂಗವೇ. ಪತ್ರಿಕೆ ಓದುವುದೇ ಬೇಡ ಎನಿಸುವಷ್ಟು ದುಃಖ-ಕಿನಿಸಿಗೆ-ಬೇಸರ-ಸಂಕಟ. ನಮ್ಮವರ ಕತೆ ಏಕಿಷ್ಟು ಹೀನಾಯ ಎಂಬುದೇ ಅರ್ಥವಾಗದು. ಇದರೊಂದಿಗೆ ವಿಧಿಯೂ ಧೂರ್ತಗತಿಯ ಪಾಶ ಒಗೆಯುತಿದ್ದಾನೆ. ಯಾರು ಸತ್ತು ಮಣ್ಣಾಗಬೇಕೋ ಅವರಿಗಲ್ಲ ಸಾವು; ಯಾರು ಅಗತ್ಯವಾಗಿ ಬದುಕಿಬಾಳಬೇಕೋ ಅವರಿಗೆ!

ಇದು ಪ್ರಪಂಚ!

## ೧೧

"ಸರಸಾ...ಸರಸಾ!"

ಕರೆಯುತ್ತ ಒಳ ಬಂದಳು ಸರಸಳ ಗೆಳತಿ ರಾಧಾ.

"ಸರಸಾ...! ಮನೆಯಲ್ಲಿಲ್ಲವೇ? ಎಲ್ಲಿ ಹೋಗಿದ್ದಾಳೆ?"

ಕೆಲಸದಾಕೆ ಬಂದು ಹೇಳಿದಳು "ಅಮ್ಮ ಸ್ನಾನ ಮಾಡುತಿದ್ದಾರೆ."

"ಏನಮ್ಮಾ, ಮನೆಯೆಲ್ಲಾ ತಣ್ಣಗೆ?"

"ಮಕ್ಕಳೆಲ್ಲಾ ಶಾಲೆಗೆ ಹೋದನಂತರ ತಣ್ಣಗಿರಲೇ ಬೇಕಲ್ಲ?"

"ನಿಜ....ನಿಜ."

"ಕುಳಿತುಕೊಳ್ಳಿ. ಅಮ್ಮ ಇದೀಗ ಬಂದಾರು. ಹೇಳಿ ಬರುವೆ.

ಸರಸ ಸ್ನಾನ ಮಾಡಿ ಮಡಿಯುಟ್ಟು ಬಂದವಳೇ "ಏನಮ್ಮಣ್ಣೀ! ಬಹಳ ಅಪರೂಪ?"

ಗೆಳತಿಯ ಪ್ರಶ್ನೆಗೆ "ನಿನಗೇನು; ಕಾರಿದೆ ಡರ್ ಅಂತ ಬಂದಿಳಿಯುತ್ತಿ! ನಾನು ಬಸ್ಸಿಗೆ ತಾಕಲಾಡಬೇಕು. ಅದೂ ಕೂಡ ತಕ್ಷಣ ಸಿಕ್ಕುತ್ತೆ? ಕಾದು ಕಾದು ನಿಲ್ಲಬೇಕು. ಎಷ್ಟೋ ಸಲಿ ಹೊರ ಹೋಗುವ ಗೋಳೇ ಬೇಡಎನಿಸುತ್ತೆ."

ಸರಸ ಬಳಿಯಲ್ಲಿ ಕುಳಿತುಕೊಳ್ಳುತ್ತಲೂ ರಾಧಾ ನುಡಿದಳು "ನಿನಗೊಂದು ವಿಶೇಷ ಸುದ್ದಿ"

"ನಿನಗೂ ಪರಾರಿಯಾಗಿರುವ ಸುದ್ದಿ ಗೊತ್ತಾ?"

"ನಿಜವಾಗಿ...ತಲೆಯಾಡಿಸಿದಳು ಅವಳು"

"ಹೌದು. ಆಗಲೇ ಎರಡು ವಾರವಾಗಿದೆ."

"ಏಕೆ ಪರಾರಿಯಾದ? ಅವನಿಗೇನಾಯಿತು?"

"ಅವನು ಭಾರೀ ಕಳವು ಮಾಡಿದ್ದನಂತೆ! ಆ ಹಣದೊಡನೆ ಪರಾರಿಯಾಗಿದ್ದಾನೆ ಎಂದು ಸುದ್ದಿ. ನೋಡಿದರೆ ಪೋಲೀಸಿನವ! ಹೇಗಿದೆ ನೋಡು!"

"ಅಯ್ಯೋ, ಬಿಡು. ಪೋಲೀಸಿನವರು ಕದ್ದಷ್ಟು ಕಳ್ಳರೇನು ಕದ್ದಾರು? ಬಹಿರಂಗವಾಗದಷ್ಟು ಎಚ್ಚರವಹಿಸುವುದರಿಂದ ಸುದ್ದಿ ಹೆಚ್ಚಾಗಿ ಹೊರ ಬೀಳುವುದಿಲ್ಲ!"

"ಎಲ್ಲರೂ ಹಾಗಿದಾರೆ ಎನ್ನುವುದಕ್ಕಾಗುವುದಿಲ್ಲ. ಬಹುಭಾಗ ಎನ್ನಬಹುದೇನೋ...."

"ಎರಡುವಾರವಾದರೂ ಅವನು ಸಿಕ್ಕಿಲ್ಲವೇ? ಅಥವಾ ಪೋಲೀಸಿನವನಲ್ಲವೇ ತಿಂದುಕೊಳ್ಳಲಿ, ಎಂದು ಬಿಟ್ಟುಬಿಟ್ಟದಾರೋ?"

"ಬಹುಶಃ ಸಿಕ್ಕಿಲ್ಲ...."

"ನಿನಗೆ ಹೇಗೆ ತಿಳಿಯಿತು?"

"ಸ್ಕೂಲು ಮಕ್ಕಳಿಂದ...."

"ಮುಂದೆ ಇವಳ ಜೀವನ?"

"ನಿಮಗೆ ಅಂಟಿಕೊಳ್ಳಬಹುದು."

"ಈ ಮನೆ ಕಡೆ ಸುಳಿಯಗೊಡಿಸುವುದಿಲ್ಲ!" ಗಟ್ಟಿಯಾಗಿ ನಕ್ಕಳು ಸರಸಿ ಒಡಲ ಕಿಚ್ಚನ್ನು ಕಕ್ಕಿ.

"ಬಹುಶಃ ಪೋಲೀಸ್ ಡಿಪಾರ್ಟ್‌ಮೆಂಟಿನಿಂದ ಹಣಕೊಡಬಹುದು."

"ಅವಳು ಬೇಕರಿಯಲ್ಲಿ ಕೆಲಸ ಮಾಡುತ್ತಿದ್ದಾಳೆ. ಹೇಗೂ ಕಳೆಯುತ್ತೆ."

"ಕಸ ಮುಸುರೆ ಬಳಿದರೆ ಎಷ್ಟು ಕೊಟ್ಟಾರು? ಮೂರು ಮಕ್ಕಳನ್ನು ಸಾಕಬೇಕಲ್ಲ?"

"ಹೇಗಾದರೂ ಮಾಡಿಕೊಳ್ಳಲಿ, ನಾನಂತೂ ಸೇರಿಸುವುದಿಲ್ಲ."

"ಪಾಪ! ನಿನ್ನ ಮಕ್ಕಳನ್ನೆಲ್ಲಾ ಅವಳೇ ಸಾಕಿದ್ದು!"

"ಅದೇನು ಮಹಾಕಷ್ಟ ? ಹೊಟ್ಟೆ ತುಂಬ ಉಣ್ಣಲಿಲ್ಲವೇ? ಉಡಲಿಲ್ಲವೇ? ಮಾವ ಹೋದಾಗಿನಿಂದ ತಾಯಿ ಮಗಳನ್ನು ನಾವು ಸಾಕಲಿಲ್ಲವೇ? ಕೊನೆಗೆ ಮದುವೆ ಮಾಡಿದ್ದಾಯ್ತು. ಇನ್ನೂ ನೋಡುವುದೆಂದರೆ ಹೇಗೆ?"

"ಸರಿ ಬಿಡು. ಅವಳೇನು ನಿಮ್ಮನ್ನು ಕೇಳಲಿಲ್ಲವಲ್ಲಾ?"

"ಕಮಲಾ–ಸುಮನಾ ಅಂತ ಯಾವಾಗಲೂ ಕುಣಿಯುತಿದ್ದಳು. ಮೂವರ ಗತಿಯೂ ಒಂದೇ ರೀತಿ ಆಯಿತಲ್ಲ? ಮೂವರ ದರ್ಜೆಯೂ ಒಂದೇ! ಬಾಳೂ ಒಂದೇ! ಅವರನ್ನು ಸೇರಿಸಿಕೊಂಡರೆ ನಮ್ಮ ಮಕ್ಕಳೂ ಹದಗೆಟ್ಟಾರು!"

"ನಿಜ, ಸರಸಿ."

"ಈ ಮೂವರ ಗೆಳೆತನ ನನಗೆ ಆಗಲೂ ಸರಿದೋರುತ್ತಿರಲಿಲ್ಲ."

ಗೆಳತಿಗೆ ಕೈ ತುಂಬಾ ಆತಿಥ್ಯ ನಡೆಸಿದಳು ಸರಸಿ, ಮಾತು ಕತೆಗಳಲ್ಲಿ ಅವೆಷ್ಟು ಹೊತ್ತು ಉರುಳಿತೋ, ನಗೆ ಚಾಟಿಕೆಯ ನಗುವಿನಲೆ ಮಾಡು ಮುಟ್ಟುವಷ್ಟು ಮೊಳಗಿತು...ಮಾತಿನ ಪೆಟ್ಟಿಗೆ ಬರಿದಾದ ಮೇಲೆ ಎದ್ದು ಮನೆಗೆ ಹೊರಡುತ್ತ "ನಿರ್ಮಲೆ ಮದುವೆ ವಿಚಾರ ಏನಾಯ್ತು ಸರಸೀ?" ಎಂದಳು ರಾಧಾ ಕುತೂಹಲಭರಿತವಾಣಿಯಲ್ಲಿ.

"ಅವರು ಕೇಳುತ್ತಲೇ ಇದ್ದಾರೆ. ಈ ತಿಂಗಳಲ್ಲಿ ಮಾತುಕತೆಗೆ ದಿವಸ ಚೆನ್ನಾಗಿಲ್ಲವೆಂದು ಸುಮ್ಮನಿದ್ದೇವೆ. ಬಹುಶಃ ಆಗಬಹುದು."

"ನಿನ್ನ ಗೆಳತಿಗೊಂದು ಘನವಾದ ಉಡುಗೊರೆ ಕೊಡಲು ಮರೆಯಬೇಡ! ಆಯಿತೇ?"

"ಓ ಆಗಲಿ. ನಿನ್ನ ಬಿಟ್ಟು ಬಿಡವುದಕ್ಕಾಗುತ್ತದೆಯೇ?" ಎನ್ನುತ್ತ ಬೆನ್ನು ತಟ್ಟಿದಳು ಸರಸಿ. ಮುಖ ಅರಳಿ ಮಂದಾರ ಪುಷ್ಪವಾಯಿತು.

ಗೆಳತಿಯನ್ನು ಕಳುಹಿಸಿ ಒಳ ಬಂದಾಗಲೇ ಪ್ರಾಂಗಣದಲ್ಲಿ ಕಾರು ಬಂದು ನಿಂತಿತು. ರಘು ಒಳಬಂದ. ರೇಡಿಯೋ ಗ್ರಾಂ ಇಂಗ್ಲೀಷ್ ಸಂಗೀತ ಬಿತ್ತರಿಸುತಿತ್ತು. ಆಳುಕಾಳುಗಳು ಯಜಮಾನರ ಊಟ ಉಪಚಾರಗಳಿಗೆ ಕಂಕಣಬದ್ಧರಾದರು. ಮಡದಿಯ ಮುಗುಳು ನಗೆ ಸ್ವಾಗತ ನೀಡಿತು. ಅವನು ಕೋಟು ಕಳಚುತಿದ್ದಂತೆ ಗೋಪುವಿನ ಸುದ್ದಿಯನ್ನು ಬಣ್ಣನೆಯ ಮಾತುಗಳಲ್ಲಿ ಬಿತ್ತರಿಸಿದಳು ಮಡದಿ.

"ಓಹೋ! ಅವನಿಗೇನು ಬಂದಿತ್ತು ಕೇಡು? ಕೈ ತುಂಬ ಸಂಬಳ ಬರುವಾಗ ಕಳ್ಳತನ ಏಕೆ?"

"ಅವನು ಹೆಣ್ಣು, ಹೆಂಡಗಳ ಪ್ರಿಯ!"

"ಸರಿ ಬಿಡು. ಮೂರು ಮಕ್ಕಳು. ಹೇಗೆ ಸಾಕುತ್ತಾಳೋ..."

"ಪೋಲೀಸ್ ಡಿಪಾರ್ಟ್‌ಮೆಂಟು ಅವಳಿಗೆ ಹಣ ಕೊಡುತ್ತದಂತೆ. ಅವನು ಉತ್ತರದ ಕಡೆಗೆ ಪರಾರಿಯಾಗಿದ್ದಾನೆಂದು ವದಂತಿ. ಅವನ ತಪಾಸಣೆಯಲ್ಲಿ ಪೋಲೀಸರು ತೊಡಗಿದ್ದಾರೆ. ಸಿಕ್ಕಿದರೆ ಜೈಲು ಶಿಕ್ಷೆಯಾಗ ಬಹುದು! ಇದೊಂದು ತೀರಾ ಅವಮಾನ."

"......"

"ಕೀಳು ಜನವೆಂದು ದೂರವಿಟ್ಟದ್ದೆ. ಈ ದುರ್ಗಂಧ ಎಷ್ಟು ದೂರವಾದರೂ ವ್ಯಾಪಿಸುತ್ತೆ."

ಅವನು ಮಾತಾಡದೆ ಮಹಡಿಯ ಮೆಟ್ಟಲುಗಳನ್ನು ದಡದಡನೆ ಹತ್ತಿದ.

ಕೊಠಡಿಯ ಪಕ್ಕದಲ್ಲೇ ಬಾಲ್ಕನಿ. ಅದರಲ್ಲಿ ನಾಲ್ಕುರು ಕುರ್ಚಿಗಳು. ಮಧ್ಯೆ ಟೀಪಾಯಿ. ಅದರ ಮೇಲೆ ಮಾಸಿಕ ತ್ರೈಮಾಸಿಕ ಮತ್ತು ದಿನಪತ್ರಿಕೆಗಳು ಇದ್ದುವು. ದಿನ ಪತ್ರಿಕೆಯನ್ನು ಕೈಗೆ ತೆಗೆದುಕೊಂಡ. ಅದರಲ್ಲಿ ಪುಟ ಪುಟಕ್ಕೂ ಅನಾತ್ಮೀಯ ವಿಷಯಗಳ ಉಗ್ರಾಣವೇ ಇತ್ತು. ಕದಡಿ ಬಗೆಗೆಟ್ಟ ಮನಸ್ಸಿಗೆ ಇನ್ನಷ್ಟು ಕಿಚ್ಚು ಹಚ್ಚುವಂತೆ.

ರಘು ಆಲೋಚನಾಕ್ರಾಂತನಾದ. ಒಂದಾನೊಂದು ಕಾಲದಲ್ಲಿ ತಂಗಿ ಎಂದರೆ ಪಂಚಪ್ರಾಣ. ಆ ಆತ್ಮೀಯತೆ ಹದಿಹರೆಯ ದಾಟುವವರೆಗೂ ಇತ್ತು. ಬಹುಶಃ ತಂದೆಯ ವ್ಯಾಪಾರ ತನ್ನ ಕೈಗೆ ಬಂದು ತಾನು ಸ್ವತಂತ್ರನಾದ ನಂತರವೇ ಆತ್ಮೀಯತೆಯ ಒಂದೊಂದು ಕೊಂಡಿಯೂ ಕಳಚ ತೊಡಗಿತೇನೋ...ಅಲ್ಲ, ಅಲ್ಲವೇ ಅಲ್ಲ ಮತ್ತಾವಾಗ?

ಸರಸೀ ಸತಿಯಾಗಿ ಬಂದಾಗಿನಿಂದ.

ಆಗ ಇಬ್ಬರಲ್ಲೂ ಆತ್ಮೀಯತೆ ಇದ್ದೇ ಇತ್ತು. ಬರಬರುತ್ತಾ ಕೆಡುತಿದ್ದುದು ಗೊತ್ತು. ಆದರೂ ಅವಳು ಒಳ್ಳೆಯ ಹುಡುಗಿ. ತುಂಬಾ ಕೆಲಸ ಗಾತಿ. ಇವಳಿಗೇಕೋ ಇಲ್ಲದ ದ್ವೇಷ. ಒಮ್ಮೆ ನೋಡಿ ಬರಬೇಕಿತ್ತು. ಆದರೆ.... ಆದರೆ, ಆ ಪೋಲೀಸ್ ಕಾಲೋನಿಗೆ ಯಾರು ಹೋಗುತ್ತಾರೆ...? ನೋಡೋಣ; ಕಾಲೋಚಿತವಾಗಿ ಏನೇನು ಆಗಬೇಕೋ, ಅದು ಆಗಿಯೇ ತೀರಬೇಕು. ಆಗುತ್ತೆ. ಮತ್ತೇಕೆ ಯೋಚನೆ....ಬೇಕರಿಗೆ ಹೋದಾಗ ಅಂದಿನಂತೆ ಸಿಕ್ಕಿದರೂ ಸಿಕ್ಕಬಹುದು. ವಿಧಿ ಯಾವಾಗ ಭೇಟಿ ಮಾಡಿಸುತ್ತಾನೋ, ಮಾಡಿಸಲಿ. ನಾನೇಕೆ ಹುಡುಕಿಕೊಂಡು ಹೋಗಬೇಕು? ಹುಟ್ಟಿಸಿದವ ಹುಲ್ಲು ಮೇಯಿಸುತ್ತಾನೆ....

ಯೋಚನಾ ತೇಜಿ ಓಡುವಷ್ಟು ಓಡಿ ಅಲ್ಲಿಗೆ ಬಂದು ನಿಂತಿತು.

ಸ್ವಲ್ಪ ಹೊತ್ತು ಕಣ್ಮುಚ್ಚಿ ಕುಳಿತ. ತಲೆಯಲ್ಲಿ ಯೋಚನೆಯಲೆಗಳು ಸುಳಿಸುತ್ತ ತೊಡಗಿದುವು. ಅವಳು ಬಾಲ್ಯದಲ್ಲಿ ಅಣ್ಣಾ...ಅಣ್ಣಾ! ಎಂದು ಕರೆಯುತಿದ್ದ ಕೋಮಲ ಧ್ವನಿ ಕರ್ಣ ಪಟಲದ ಮೇಲೆ ಹೊಚ್ಚಹೊಸದಾಗಿ ಮೊಳಗಿತು.

ಆಗ, ತಮ್ಮಿಬ್ಬರಲ್ಲಿ ಎಂತಹ ಆತ್ಮೀಯತೆ? ಎಷ್ಟೊಂದು ಭಾವ

ಬಂಧುರತೆ? ಈಗ....ಈ...ಗ ಅವಳೆಲ್ಲೋ ನಾನೆಲ್ಲೋ....

ಮಹಡಿಯ ಮೆಟ್ಟಲನ್ನು ಹತ್ತಿ ಬರುವ ಪಾದ ಸಪ್ಪಳ ಸದ್ದಿಲ್ಲದ ಶಾಂತಿಯ ತಲೆಯ ಮೇಲೆ ಪಟ ಪಟ ಬಡಿಯುವಂತೆ ಕೇಳಿ ಬರುತಿತ್ತು. ಕಿವಿಗಳು ಅತ್ತ ಗಮನಿಸುವುದರೊಳಗಾಗಿ ಮಡದಿ ಸನಿಹಕ್ಕೆ ಬಂದು ನಿಂತು "ಊಟಕ್ಕೆ ಅಣಿಯಾಗಿದೆ," ಎಂದಳು.

ನೋಟ ಅವಳ ಕಡೆಗೆ ನೋಡಲಾರದೇ ನೋಡಿತು....ಹೆಣ್ಣಾಗಿ ಹುಟ್ಟಿ ಹೆಣ್ಣಿನ ಮೇಲೆಯೇ ದ್ವೇಷ! ರಾಗದ್ವೇಷಗಳ ಪರವಶವಾದ ಅವಳಲ್ಲಿ ಎಂತಹ ಕ್ರೂರತನ...!

"Much grieved my heart to think
What man has made of man"

೧೨

ಮೋಹಿನಿ ಒಂದು ಕಾಲದಲ್ಲಿ ಮೋಹಿನಿಯೇ ಆಗಿದ್ದಳು. ಹೆಣ್ತನಕ್ಕೆ ಒಪ್ಪುವಂತಹ ಮೈ ಮಾಟ. ಮುದ್ದುಮುದ್ದಾದ ಮುಖ ಬಿಂಬ. ಗುಂಗುರು ಗುಂಗುರು ಮುಂಗುರುಳಿನ ತನ್ವಂಗಿ.

ಇಂದು ನೆತ್ತರಾರಿ ಬೆಂಡು ಬೆಂಡಾದ ಮೂಳೆಯ ಮಾನವಿ. ಕಣ್ಣಿನ ಸುತ್ತ ಕಡೆದ ಕಪ್ಪುವರ್ಣ. ಮುಖ ಬಿಂಬದ ಮೇಲೆ ತಾಮ್ರ ವರ್ಣದ ಹರವು. ಆಗಲೇ ಸುಕ್ಕುಗಟ್ಟುತ್ತಿರುವ ಚರ್ಮ. ಕಂಗಳ ಕನ್ನಡಿಯಲ್ಲಿ ನಿಣುಕುವ ಶೋಕ ಛಾಯೆ. ಯಾರಾದರೂ ನೋಡಿದ ಪ್ರಪ್ರಥಮ ನೋಟಕ್ಕೆ ಆಂತರಂಗಿಕ ನೋವನ್ನು ಅಳೆಯಬಹುದಾದಂತಹ ದೈನ್ಯ ರೂಪ.

ಮಕ್ಕಳನ್ನು ಶಾಲೆಗೆ ಬಿಟ್ಟು ಬಂದ ಮೋಹಿನಿ ಬೇಕರಿಯ ಕಡೆ ಹೋಗಲು ಅಣಿಯಾವಾಗಲೇ ಒಳ ಹೆಜ್ಜೆಯಿಟ್ಟ ಚಂದ್ರಿ "ಮೋಹಿನಿ ! ಉತ್ತರದ ಕಡೆ ಹೋದ ಪೋಲೀಸರು ಬೆಳಿಗ್ಗೆ ಹಿಂದಿರುಗಿದರು. ಗೋಪು ಸಿಕ್ಕಲಿಲ್ಲವಂತೆ. ನಾಳೆ ಬೊಂಬಾಯಿಗೆ ಹೋಗುತ್ತಾರಂತೆ."

"ಬೊಂಬಾಯಿಯಲ್ಲಿರುವ ಸುದ್ದಿ ಬಂದಿದೆಯೇ ?"

"ಗೊತ್ತಿಲ್ಲ."

"ಯಾವಾಗ ಹೋಗುತ್ತಾರೆ ಬೊಂಬಾಯಿಗೆ ?"

"ಬಹುಶಃ, ಅವನ ಪತ್ತೆ ತರದೂರಿನಲ್ಲಿರಬಹುದು. ಸುಳಿವು ಸಿಕ್ಕಿದ ಮೇಲೆ ಮುಂದಿನ ವ್ಯವಸ್ಥೆ."

"ಹಾಗೋ....?"

"ಬೊಂಬಾಯಿಗೆ ಹೋಗಿದ್ದಾನೆಂದು ಗುಮಾನಿ. ಅಂದು ರಾತ್ರಿ ಟೋಲ್ ಗೇಟ್‌ಗೆ ಕಳುಹಿಸಿದ್ದರಷ್ಟೆ, ಅಲ್ಲಿಂದಲೇ ಲಾರಿಯಲ್ಲೋ ಬಸ್ಸಿನಲ್ಲೋ ಪಯಣಿಸಿರಬೇಕು, ಎಂಬ ಊಹೆ."

ಬಾಗಿಲು ಮುಚ್ಚಿಕೊಳ್ಳುವ ಮುನ್ನ ಹೇಳಿದಳು ಮೋಹಿನಿ "ಕಂಡವರ ಮಾಲು ಏಕೆ ಬೇಕಿತ್ತು ಹೇಳು? ಎಷ್ಟು ದಿನ ತಪ್ಪಿಸಿಕೊಳ್ಳಲು ಸಾಧ್ಯ? ಬುದ್ಧಿಹೀನನನ್ನು ಕಟ್ಟಿಕೊಂಡು ನಾನು ಪರಿಪಾಡು ಪಡುವುದಾಗಿದೆ."

"ದೇವರಿದ್ದಾನೆ !"

"ಅಯ್ಯೋ, ಚಂದ್ರಿ! ದುಷ್ಟರ ಕಡೆ ದೇವರು ಧರ್ಮ ಇರುತ್ತದೆಯೇ."

"ಕಾಲ ಹಾಗಿದೆ."

"ಕಾಲ ಹಾಗಿಲ್ಲ, ಜನ ಹಾಗಿದ್ದಾರೆ."

ಮೋಹಿನಿ ಸರಸರ ಮೆಟ್ಟಿಲಿಳಿದು ಬೇಕರಿಯ ಹಾದಿ ಹಿಡಿದಳು. ತಲೆಯಲ್ಲಿ ಆನೆಗಳು ನುಗ್ಗಿ ಧಾಳಿ ಎಬ್ಬಿಸಿದಷ್ಟು ಗೊಂದಲ, ಚಿಂತೆ...... ಚಿಂತೆ... ಕೊನೆಗಾಣದ ಚಿಂತೆ. ಎಷ್ಟೋ ಸಲಿ, ವಾಹನಗಳ ಪರಿವೆ ಇಲ್ಲದಷ್ಟು ಮನಸ್ಸು ವಿವಶ. ಅಂತೂ ಬೇಕರಿಯಲ್ಲಿ ಯಜಮಾನ ಇರಲಿಲ್ಲ. ಕೆಲಸ ಮುಗಿಯುವ ಹೊತ್ತಿಗೆ ಒಂದೂವರೆ ಗಂಟೆ. ಮಕ್ಕಳನ್ನು ಮನೆಗೆ ಕರೆತರಬೇಕು. ಇನ್ನು ಯಜಮಾನನಿಗೆ ಕಾಯುವಂತಿಲ್ಲ. ಅಲ್ಲಿಂದ ನೇರವಾಗಿ ಶಾಲೆಗೆ ಹೋಗಿ ಮಕ್ಕಳನ್ನು ಮನೆಗೆ ಕರೆತಂದಳು.

ಊಟಕ್ಕೆ ಕುಳಿತರೆ ತುತ್ತು ಗಂಟಲಲ್ಲಿ ಇಳಿಯದು. ಒಂದೆರಡು ಕ್ಷಣ ಕಣ್ಣ ಮುಂದಿನ ವಸ್ತುಗಳೆಲ್ಲಾ ಗಿರಗಿರಸುತ್ತಿದುವು. ಹೇಗೋ ಹಾಗೇ ಸುಧಾರಿಸಿಕೊಂಡು ಮನೆಗೆಲಸದಲ್ಲಿ ಮನವಿಟ್ಟಳು.

"ಅಮ್ಮಾ! ನೀನು ಸದಾ ಚಿಂತೆಯಲ್ಲೇ ಮುಳುಗಿದ್ದರೆ ನಿನ್ನ ದೇಹಸ್ಥಿತಿ ಹೇಗಾಗಬೇಡ. ಡಾಕ್ಟರ್ ಈ ವಾರ ನಿನ್ನನ್ನು ಆಸ್ಪತ್ರೆಗೆ ಬರ ಹೇಳಿದ್ದರಲ್ಲವೇ? ನೀನು ಮತ್ತೆ ಹೋಗಲೇ ಇಲ್ಲ. ನಿನ್ನ ದೇಹಸ್ಥಿತಿ ಏನೇನೂ ಸುಧಾರಿಸಲಿಲ್ಲ. ಇಂದು ಆಸ್ಪತ್ರೆಗೆ ಹೋಗಿ ಬರೋಣವೇ?"

"ಬೆಳಿಗ್ಗೆ ಹೋಗುವುದು ಉತ್ತಮ. ಆದರೆ, ಈಗಿನ ಪರಿಸ್ಥಿತಿಯಲ್ಲಿ

ಔಷಧಿ ತೆಗೆದುಕೊಳ್ಳುವುದಕ್ಕೂ ಮನಸ್ಸಿಲ್ಲ. ತಲೆಯೆತ್ತಿ ತಿರುಗದಂತಾಗಿದೆ. ಈ ಅವಮಾನ ಸಹಿಸುವುದು ಎಷ್ಟು ಕಷ್ಟ? ರಸ್ತೆಯಲ್ಲಿ ತಿರುಗುವುದಕ್ಕೂ ನಾಚಿಕೆ. ದ್ರವ್ಯ ಕಳೆದರೂ ಚಿಂತೆಯಿಲ್ಲ. ಮಾನ ಉಳಿದರೆ ಸಾಕು. ಮಾನವಿಲ್ಲದ ಮಾನವ ಜನ್ಮ ಸುಡಬೇಕು. ತಕ್ಕನೆ ಎರಡೂ ಕಣ್ಣುಗಳಲ್ಲಿ ಕಂಬನಿ ಮೊಳೆತುವು. ದೀರ್ಘವಾದ ನಿಟ್ಟುಸಿರು ಬಿಟ್ಟು ಕಂಬನಿಯನ್ನು ತೀಡಿಕೊಂಡಳು ಮೋಹಿನಿ.

"ಅಮ್ಮಾ? ಖಂಡಿತ ದುಃಖ ಹಚ್ಚಿಕೊಳ್ಳಬೇಡ. ಇತರರ ಪಾಪಕ್ಕೆ ನಾವು ಹೊಣೆಯಲ್ಲ. ಛೇ....! ನೀನೂ ಇಲ್ಲದೆ ಹೋದರೆ ನಮ್ಮ ಗತಿಯೇನು? ಅಷ್ಟೂ ಯೋಚಿಸಬಾರದೇ?"

"ಅದರಿಂದಾಗಿಯೇ ಈ ಬದುಕು. ಹೆಣ್ಣು ಮಕ್ಕಳಿಗಾಗಿ ಬದುಕಲೇ ಬೇಕು. ನಿಮ್ಮನ್ನು ಹಾದಿಯಲ್ಲಿ ಹಾಕಲಾರೆ. ಅವಮಾನ-ಸಂಕಟ ಕಷ್ಟ ಅನುಭವಿಸುತ್ತಿರುವುದು ನಿಮಗಾಗಿ. ಅವನ್ನು ನೀನು ಮನಗಾಣಬೇಕು."

ಆ ಮಾತಿಗೆ ಸಕ್ಕೂ ತನ್ನಲ್ಲೇ ಯೋಚಿಸಿದಳು......ಹೆತ್ತವರ ಹೊಣೆಗಾರಿಕೆ ಸಾಮಾನ್ಯವಲ್ಲ. ನಮಗೇನು ತಿಳಿದೀತು......ಆಟ-ಊಟ ಇಷ್ಟೆ. ಒಂದು ವೇಳೆ ನಾವು ಸಾಯುವುದಾದರೆ ಎಲ್ಲರೂ ಒಟ್ಟಿಗೆ ಸತ್ತರೆ ಯಾರಿಗೂ ನೋವಿಲ್ಲ.

ಅದೇ ವೇಳೆಗೆ ನೆರೆಮನೆಯ ಚಂದ್ರಿ ಮತ್ತು ಅವಳ ಗಂಡ ಶ್ಯಾಂ ಒಳಬಂದರು. ತಾಯಿ ಮಕ್ಕಳ ಮುಖಭಾವವನ್ನು ನೋಡಿ "ಸುಮ್ಮನೆ ಮನಸ್ಸಿಗೆ ಹಚ್ಚಿಕೊಂಡು ದುಃಖಿಸುತ್ತಿದ್ದರೆ ಗತಿಯೇನು? ಮುಂದಿನ ಕರ್ತವ್ಯ ಮಾತ್ರ ಯೋಚಿಸಬೇಕು......." ಎಂದು ಸಕ್ಕೂವನ್ನು ಕರೆದು ಬಳಿಯಲ್ಲಿ ಕೂಡಿಸಿಕೊಂಡು ತಲೆಯನ್ನು ನೇವರಿಸಿ ಮುದ್ದುಮಾಡಿದ.

ಚಂದ್ರಿ ಮೋಹಿನಿಯ ಬಳಿ ಕುಳಿತುಕೊಂಡು "ಈಗ ಹೇಗಿದ್ದೀ? ನೀನಂತೂ, ಇನ್ನೂ ಸುಧಾರಿಸಿಕೊಳ್ಳಲಿಲ್ಲ. ಟಾನಿಕ್ ತೆಗೆದುಕೊಳ್ಳುತ್ತಿರುವೆಯಾ? ಚಿಂತೆಯಿಂದಲೇ ಅರ್ಧ ಕರಗುತಿದ್ದಿ ಎಂದು ತೋರುತ್ತೆ."

"ಚಿಂತೆಯಿಂದಲ್ಲ ಅವಮಾನದಿಂದ ಕುಗ್ಗುತ್ತಿರುವೆ. ಇನ್ನು ಟಾನಿಕ್ ಎಲ್ಲಿ ಹಿಡಿಯುತ್ತೆ ಹೇಳು?"

"ಗೋಪು ಸಂಬಳ ಪಡೆಯಲು ಆಫೀಸಿಗೆ ಬರುತ್ತೀಯೇನು?"

"ಅಲ್ಲಿಗೆ ನಾನು ಬರಲಾರೆ ಶ್ಯಾಮಣ್ಣ. ಆ ಇನ್ಸ್‌ಪೆಕ್ಟರ್ ಇದ್ದಾನಲ್ಲ, ಅವನನ್ನು ನೋಡಿದರೆ ಮೈ ನಡುಕ ಬರುತ್ತೆ. ಫಾರಂ-ಗೆ ಇಲ್ಲಿಯೇ ಸಹಿ ಹಾಕಿ ಕೊಡುವೆ. ದಯವಿಟ್ಟು ನೀವೇ ತಂದುಕೊಟ್ಟು ಉಪಕಾರ ಮಾಡಿ. ಹೋದಸಲಿ ಹೋಗಿದ್ದೇ ಸಾಕಾಗಿದೆ."

"ಶ್ಯಾಮಣ್ಣಾ ! ಹೋದಾವರ್ತಿ ಹಣ ತಂದುದಕ್ಕೆ ಅಪ್ಪ ಚೆನ್ನಾಗಿ ಬಾರಿಸಿದ್ದ. ಈ ಸಲ ಬಂದರೆ ಇನ್ನೇನು ಗೋಳೊ......" ಎಂದಳು ಸಕ್ಕೂ ಎಳೆಗಣ್ಣುಗಳಲ್ಲಿ ಸಣ್ಣಗೆ ಬೆಳ್ಳಿಯ ಗೆರೆಯಂತೆ ನೀರಾಡಿತು.

"ಇರಲಿ, ಮಗು. ಅವನೀ ಸಲ ಬಂದರೆ ಬುದ್ಧಿ ಹೇಳೋಣ. ಹಿಂದಿನದೆಲ್ಲಾ ಮರೆತು ಬಿಡು. ದೇವರು ದೊಡ್ಡವನು ಹೇಗಾದರೂ ಕಾಪಾಡುತ್ತಾನೆ."

"ಆ ದೇವರಿಗೆ ನಾವು ಕಾಣಿಸಬೇಕಲ್ಲ?"

"ಅವನಿಗೆ ಮೈಯೆಲ್ಲಾ ಕಣ್ಣು. ಅವನು ಕಾಣದಿರುವುದು ಯಾವುದು?"

"ನೀನು ಅರ್ಜಿಗೆ ಮಾತ್ರವಲ್ಲ, ಪುಸ್ತಕಕ್ಕೂ ಸಹಿ ಹಾಕಬೇಕಾಗಿದೆ. ನೀನು ಅಲ್ಲಿಗೆ ಬರದೆ, ಯಾವುದೂ ನಡೆಯದು. ಯಾರಿಗೆಲ್ಲಾ ಏತಕ್ಕೆ ಹೆದರಬೇಕು?" ಎಂದು ಶ್ಯಾಂ ಪುನಃ "ನೀನು ನನ್ನೊತೆಗೇ ಬಾ ಮೋಹಿನಿ. ನಾನು ನಿನಗೆ ಹಣ ಕೊಡಿಸಿ ಕಳಿಸುವೆ."

"ಶ್ಯಾಮಣ್ಣಾ! ಈ ಕಾಲದಲ್ಲಿ ನಿಮ್ಮಂತಹವರು ಅಪರೂಪವೇ. ಈ ಕಾಲೋನಿಯಲ್ಲಿ ಇದುವರೆಗೆ ಯಾರ ಸ್ನೇಹವನ್ನೂ ಬಯಸಲಿಲ್ಲ. ಈಚೆಗೆ ನೀವು ಇಲ್ಲಿಗೆ ಬಂದ ಮೇಲೆ ನಮಗೊಂದು ಒಳ್ಳೆಯ ನೆರೆ. ನೀವೇ ನನಗೆ ಅಣ್ಣ-ಅತ್ತಿಗೆ. ದೇವರು ನಿಮ್ಮನ್ನು ಚೆನ್ನಾಗಿಟ್ಟಿರಲಿ."

ಮೋಹಿನಿಯ ಮಾತಿಗೆ ನುಡಿದನಾ ಗೃಹಸ್ಥ, "ಮನುಷ್ಯತ್ವ ಇಲ್ಲದಿದ್ದರೆ ನಾವು ಮನುಷ್ಯರೇ ಅಲ್ಲ ಬಿಡು. ನಾನು ಗೋಪುಗೆ ಎಷ್ಟೋ ಬಾರಿ ಬುದ್ಧಿ ಹೇಳಿದ್ದೆ. ಅವನು ನನ್ನ ಮಾತಿಗೆ ಕಿವಿಗೊಡಲಿಲ್ಲ. ಇಂತಹ ಬಾಳಾದರೂ ಏಕೆಬೇಕು? ಅನ್ಯಾಯವಾಗಿ ಬುದ್ಧಿ ಕೆಡಿಸಿಕೊಂಡು ಹಾಳು ಹವ್ಯಾಸಗಳಿಗೆ ಇಳಿದ ಮೇಲೆ ಆಗುವುದು ಹೀಗೆಯೇ. ಮನೆಯಲ್ಲಿ ಹಾಲಿನಂತಹ ಸಂಸಾರ ಇರುವಾಗ ಬಾಳು ಹಾಳು ಮಾಡಿಕೊಂಡ ಅಯೋಗ್ಯ."

"ಅಂಕಲ್? ನಾವೇನಾದರೂ ವಿರುದ್ಧವಾಗಿ ಸೊಲ್ಲೆತ್ತಿದರೆ ನಮ್ಮ ಕತೆ ಮುಗಿದೇ ಹೋಗುತ್ತದೆ. ಅಂತಹ ಕ್ರೂರಿ. ಈ ಜನ್ಮದಲ್ಲಿ ಸರಿ ಹೋಗುವವನಲ್ಲ ಅಪ್ಪ."

"ಏನು ಮಾಡೋಣ ಹೇಳು? ಹುಟ್ಟು ಗುಣ."

"ಅಂಕಲ್! ಒಂದು ವೇಳೆ ಅಪ್ಪ ಸಿಕ್ಕಿದರೆ ಏನು ಮಾಡುತ್ತಾರೆ?"

"ಅರೆಸ್ಟ್ ಮಾಡುತ್ತಾರೆ. ತಪ್ಪಿಗಾಗಿ ಜೈಲು ಶಿಕ್ಷೆ ಅನುಭವಿಸಬೇಕು!"

"ಎಷ್ಟು ದಿನ?"

"ದಿನವಲ್ಲ, ವರ್ಷಗಟ್ಟಲೆ ಅನುಭವಿಸಬೇಕು."

"ಹೋಗಲಿ ಬಿಡಿ; ಅನಂತರವಾದರೂ ಬುದ್ಧಿ ಬಂದೀತು."

"ದೈವೇಚ್ಛೆ!"

ಸ್ವಲ್ಪಹೊತ್ತು ರುದ್ರಮೌನ ರಾಜ್ಯವಾಳಿತು. ಅನಂತರ ಶ್ಯಾಂ ತಾನೆ ಮೌನ ಮುರಿದ.

"ನೀನು ನನ್ನೊಂದಿಗೆ ಬಾ. ಚಂದ್ರಿಯೂ ಬರುತ್ತಾಳೆ. ನೀನು ಅವಳೊಂದಿಗೆ ಹಿಂದಿರುಗಬಹುದು."

"ಆಗಲಿ."

ಮೋಹಿನಿ ಮಕ್ಕಳನ್ನು ಮನೆಯಲ್ಲಿ ಬಿಟ್ಟು ಚಂದ್ರಿ ಶ್ಯಾಮಣ್ಣನೊಡನೆ ಆಫೀಸಿಗೆ ಹೋದಳು. ಇಂದು ಆ ಸಬ್ಇನ್ಸ್‌ಪೆಕ್ಟರ್ ಇರದೆ ಇನ್ಸ್‌ಪೆಕ್ಟರ್ ಇದ್ದ. ಶ್ಯಾಂ ಮೋಹಿನಿಯಿಂದ ಖಾತೆ ಪುಸ್ತಕಕ್ಕೆ ಸಹಿ ಹಾಕಿಸಿ, ಅರ್ಜಿಯನ್ನು ತೆಗೆದು ಕೊಂಡು ಅರ್ಧ ಸಂಬಳ ಕೊಡಿಸಿದ. ತಾನೂ ಸಂಬಳ ತೆಗೆದುಕೊಂಡು ನಂತರ ಮಡದಿಗೆ ನೂರು ರೂಪಾಯಿ ಕೊಟ್ಟು ಕಳುಹಿಸಿದ.

ಅವರಿಬ್ಬರೂ ಹಿಂದಿರುಗುತ್ತಿದ್ದಾಗ ಯಾವ ಕಳ್ಳನೋ ಚಕ್ಕನೆ ಅಡ್ಡಗಟ್ಟಿ ಮೋಹಿನಿಯ ಕೈಯಲ್ಲಿದ್ದ ಚೀಲವನ್ನು ಕಿತ್ತುಕೊಂಡು ಪರಾರಿಯಾದ. ಒಂದೇ ಗಳಿಗೆಯಲ್ಲಿ ದುಷ್ಕೃತ್ಯ ನಡೆದು ಹೋಯಿತು. ಚಂದ್ರಿ ಹಿಂದಿನಿಂದ ಗುದ್ದಿದರೂ ಅವನು ತಿರುಗಿ ನೋಡದೇ ಓಡಿದ. ಹಾದಿಯಲ್ಲಿ ಪಥಿಕರೂ ಇದ್ದರು; ವಾಹನಗಳೂ ಚಲಿಸುತ್ತಿದ್ದವು. ಎಲ್ಲರ ಕಣ್ಣು ತಪ್ಪಿಸಿ ಕಣ್ಮರೆಯಾದ, ಧೂರ್ತ ಕಳ್ಳ!

ಮೋಹಿನಿಗೆ ಒಮ್ಮೆಗೇ ಕಾಲುಗಳ ಬಲ ಉಡುಗಿದಂತಾಯಿತು. ಈಗಲೀಗ ಕುಸಿವೆನೋ ಎನಿಸುವುದರೊಳಗಾಗಿ ಚಂದ್ರಿ ಹಿಡಿದುಕೊಂಡಳು. ಸನಿಹದಲ್ಲಿದ್ದವರೂ ಸಹಾಯಕ್ಕೆ ಬಂದರು. ಆದರೇನು ಕಳ್ಳ ಸಿಕ್ಕಲಿಲ್ಲ.

ಮೋಹಿನಿಯ ಮೈ ಭಯದಿಂದ ಕಂಪಿಸುವ ಮಟ್ಟಿಗೂ ಆಯಿತು.

"ಮಕ್ಕಳ ಗತಿಯೇನು ಚಂದ್ರಿ?" ಎಂದಳು ಗದ್ಗದಿತ ವಾಣಿಯಲ್ಲಿ.

"ನಡೆ, ಈಗಲೇ ಪೋಲೀಸ್ ಸ್ಟೇಷನ್ನಿಗೆ ಹೋಗಿ ದೂರು ಕೊಟ್ಟು ಬರೋಣ."

ಆ ಮಾತಿಗೆ ಒಪ್ಪಿ ನಡೆದರೆ ಕಾಲುಗಳು ಭಾರ. ಒಂದು ಗಳಿಗೆ ನಿಂತು ಕಣ್ಣುಗಳನ್ನು ಒರಿಸಿಕೊಂಡು ತನ್ನನ್ನು ತಾನೇ ಸಾವರಿಸಿಕೊಳ್ಳುತ್ತ ಯೋಚಿಸಿದಳು. "ನನ್ನ ಭಾಗಕ್ಕೆ ವಿಧಿ ಎಷ್ಟು ಕ್ರೂರ....!"

"ಮೋಹಿನಿ! ಹೆದರಬೇಡ. ಬೇಗ ಹೋಗೋಣ."

ಮೋಹಿನಿಯು ಚಂದ್ರಿಯ ಭುಜವನ್ನು ಅದುಮಿ ಹಿಡಿದುಕೊಂಡೇ ಹಿಂದಿರುಗಿದಳು. ಎದೆಯಾರಿ ಗಂಟಲೊಣಗುತ್ತಿದೆ. ದೇಹದಾದ್ಯಂತ ಕಂಪನದ ಅಲೆ ಚಿಲ್ಲನೆ ಹರಿದಾಡಿತು. ಸ್ವಲ್ಪೇ ಹೊತ್ತಿನೊಳಗಾಗಿ ಇಬ್ಬರೂ ಹಿಂದಿರುಗಿದುದನ್ನು ಶ್ಯಾಂ ಆಶ್ಚರ್ಯದಿಂದ ಹೊರ ಬಂದ.

"ದಾರಿಯಲ್ಲಿ ಕಳ್ಳ ಅಡ್ಡಗಟ್ಟಿ ಸರಕ್ಕನೆ ಮೋಹಿನಿಯ ಬ್ಯಾಗನ್ನು ಕಿತ್ತುಕೊಂಡು ಕ್ಷಣದಲ್ಲಿ ಕಣ್ಮರೆಯಾದ."

ಒಂದೇ ಬಾರಿಗೆ ವಿಷಯವನ್ನು ಒದರಿದಳು ಚಂದ್ರಿ.

"ಹಾದಿಗರು ಯಾರೂ ಇರಲಿಲ್ಲವೇ?"

"ಇದ್ದರೇನು? ಅವನು ಕೈಚಳಕ ಅಷ್ಟು ಚುರುಕು! ಒಂದು ಕ್ಷಣದಲ್ಲಿ ಎಂಥ ಅನ್ಯಾಯ! ಕಳ್ಳ! ಕಳ್ಳ! ಎನ್ನುವುದರೊಳಗೆ ಅವನು ಇಲ್ಲವೇ ಇಲ್ಲ!"

"ಅವನು ಸೈಕಲ್ ಮೇಲೆ ಬಂದಿದ್ದನೇ?"

"ಏನೋ ಗೊತ್ತಿಲ್ಲ. ಹಾದಿ ನಡೆಯುವವರೂ ಇದ್ದರು, ಸೈಕಲ್ ಸವಾರರೂ ಇದ್ದರು. ಹಾ! ಎನ್ನುವುದರೊಳಗಾಗಿ ಅವನಿಲ್ಲ!"

ಮೋಹಿನಿಯ ಬಾಯಿಂದ ಮಾತೇ ಹೊರಡದಷ್ಟು ದಿಗ್ಭ್ರಾಂತಿ. ಸಣ್ಣಗೆ ಬೆಳ್ಳಿಯ ಗೆರೆಯಂತೆ ನೀರಾಡಿತು ಕಣ್ಣುಗಳಲ್ಲಿ. ಶ್ಯಾಂ 'ದೂರು' ಬರೆದು ಕೊಟ್ಟು ಅವಳಿಂದ ಸಹಿ ಹಾಕಿಸಿ ಇನ್ಸ್‌ಪೆಕ್ಟರಿಗೆ ವರದಿ ಮಾಡಿ, ಇಬ್ಬರಿಂದಲೂ ಹೇಳಿಕೆ ಕೊಡಿಸಿದ. ಇನ್ಸ್‌ಪೆಕ್ಟರ ಮನಸ್ಸು ಮರುಗಿತು.

"ನೀನಿರುವ ಸ್ಥಿತಿಯಲ್ಲಿ ಇದು ಆಗಬೇಕೆ? ದುರದೃಷ್ಟಕರ!" ಎಂದ ಇನ್ಸ್‌ಪೆಕ್ಟರ್ ಜೇಬಿನಿಂದ ಹತ್ತು ರೂಪಾಯಿನ ನೋಟು ತೆಗೆದುಕೊಡಲು ಮುಂದಾದ. ಅವಳು ಎರಡೂ ಕೈಗಳನ್ನು ಜೋಡಿಸಿಕೊಂಡು "ದಯವಿಟ್ಟು ಕ್ಷಮಿಸಿ, ನಾನು ಕೂಲಿ ಮಾಡಿ ತಿನ್ನುವೆ. ನನಗೆ ದಾಕ್ಷಿಣ್ಯದ ಹಣ ಬೇಡ" ಎನ್ನುತ್ತ ಹೊರಟೇಬಿಟ್ಟಳು.

"ಇಂಥ ನಿಷ್ಠಾವಂತ ಹೆಣ್ಣಿಗೆ ಹೊಲಸು ಬುದ್ಧಿಯ ಗಂಡ! ಎಲ್ಲಿಂದ ಎಲ್ಲಿಗೆ? ವಿಧಿ ಇಷ್ಟು ಕ್ರೂರವಾಗಬಾರದು," ಎಂದ ಶ್ಯಾಂ ವಿಷಾದ ವಾಣಿಯಲ್ಲಿ.

ತಕ್ಷಣ ಪೋಲೀಸರ ಚಟುವಟಿಕೆ ಆರಂಭವಾಯಿತು.

ಅದೇ ದಾರಿಯಲ್ಲಿ ಬೈಕ್ ಸವಾರರು ಹೊರಟರು. ಹತ್ತು ಮಾರು ಹೋಗುವುದರೊಳಗಾಗಿ ಮೋಹಿನಿ ಮತ್ತು ಚಂದ್ರಿ ಕಂಡು ಬಂದರು.

ತಕ್ಷಣ ಬೈಕ್ ನಿಲ್ಲಿಸಿದೊಡನೆಯೇ ಹೆಂಗಳೆಯರಿಗೆ ಮತ್ತಷ್ಟು ಭಯ.

ಮಿಡಿಕಿ ಬಿದ್ದು ಪಕ್ಕನೆ ಬದಿಗೆ ಸರಿದಾಗಲೇ ಬಳಿಗೆ ಬಂದ ಪೋಲೀಸಿನವ ಕೇಳಿದ "ಅವನು ಎಂಥ ಬಟ್ಟೆ ಹಾಕಿದ್ದ....? ಕುಳ್ಳೋ? ಎತ್ತರವೋ? ಏನಾದರೂ ಚಹರೆ ಹೇಳಬಲ್ಲಿರಾ?"

"ಕೆಂಪು ಚೌಕಳಿ ಶರಟು ಇದ್ದಾಗಿತ್ತು. ಎರಡು ಕ್ಷಣಗಳ ನೋಟ, ಅಷ್ಟೆ. ಚಹರೆ ಹೇಳುವುದು ಕಷ್ಟ?" ಎಂದಳು ಮೋಹಿನಿ.

"ಇರಲಿ, ಎತ್ತರವಾಗಿದ್ದನೇ? ಅದು ಕಂಡಿರಬಹುದಲ್ಲ?"

"ಹೆಚ್ಚು ಎತ್ತರವಿರಲಿಲ್ಲ. ದಪ್ಪ ಮೈ, ಕಪ್ಪು ಬಣ್ಣ" ಎಂದಳು ಚಂದ್ರಿ.

ಅವರು ಮೋಟಾರ್ ಬೈಕ್ ಹತ್ತಿ ಹೊರಟರು. ಕಿವಿಗಡಚಿಕ್ಕುವಂತಹ ಶಬ್ದಾಯಮಾನವಾಗಿ ಕಣ್ಮರೆಯಾಯಿತು ವಾಹನ.

"ಈಗ ಕಾಳು ಕಡ್ಡಿಗೆ ಏನು ಮಾಡುತ್ತಿ? ಒಳ್ಳೆ ಕಷ್ಟಕ್ಕೆ ಸಿಕ್ಕಿಬಿದ್ದೆ! ಕಷ್ಟಗಳು ಬಂದರೆ ಹೀಗೆಯೇ, ದಂಡೈಸಿಬರುತ್ತವೆ. ಒಂದರ ಮೇಲೊಂದು....ಒಂದರ ಮೇಲೊಂದು. ಇಂಥ ಸಂದರ್ಭದಲ್ಲಿ ಎದೆಗೆಡಬಾರದು. ಧೈರ್ಯಂ ಸರ್ವತ್ರ ಸಾಧನಂ ಎಂಬ ಸೂಕ್ತಿ ಇದೆಯಲ್ಲಾ. ಅದು ಎಲ್ಲರ ಹಿತಕ್ಕಾಗಿ; ಮತ್ತು ಸಾಧನೆಗಾಗಿ."

"ದೇವರಿದ್ದಾನೆ ! ಮಾತು ತುಂಡು ಗಡಿಯಿತು. ತಲೆಯಲ್ಲಿ ನರಿಗಳ ಹಿಂಡು ಹುಯ್ಯಲೆಬ್ಬಿಸಿದಷ್ಟು ಗದ್ದಲ."

ಪುಟ್ಟ ಹೃದಯ ಎಷ್ಟು ಸಂಕಷ್ಟಗಳನ್ನು ಭರಿಸಬಲ್ಲದು......ಭವಗೋಳು ಅಂದಿಂದಿಗೂ ಇದ್ದದ್ದೇ. ಆದರೂ ಇಷ್ಟೊಂದು ಮಿತಿಮೀರಿದರೆ ಭಗವಂತನಲ್ಲದೆ ಇನ್ನಾರು ಕಾಪಾಡಬಲ್ಲರು? ಹುಟ್ಟಿಸಿದವ ನೀನೇ. ಹುಲ್ಲುಮೇಯಿಸುವವ ನೀನೇ.... ಉಳಿಸು ಇಲ್ಲವೇ ಮುಳುಗಿಸು ಏನಾದರೂ ಮಾಡು. ನನ್ನ ಜೀವನವನ್ನು ನಿನ್ನಲ್ಲಿ ಒತ್ತೆಯಿಟ್ಟಿರುವೆ......

ಮಾನಸ ನಿವೇದನೆ ಹೊಮ್ಮಿದಾಗ ಹೃದಯರಂಗದಲ್ಲಿ ನಡೆಯುತ್ತಿದ್ದ ರುದ್ರಲಾಸ್ಯದ ನೂಪುರಗಳ ಟಿಂಟಿಣಿನಾದ ಹೃದಯ ಬಿರಿಯುವಷ್ಟು ದ್ರುತಗತಿಯಲ್ಲಿತ್ತು. ಹಾದಿ ಕಳೆದುದಾಗಲೀ ಮನೆ ಮುಟ್ಟಿದುದಾಗಲೀ ಗಮನಕ್ಕೆಬಾರದಷ್ಟು ಮನಸ್ಸು ವಿವಶ.

ತಾಯಿಯ ಆಗಮನವನ್ನು ಕಿಟಕಿಯಲ್ಲಿ ಕಂಡದ್ದೇ ತಡ ಬಾಗಿಲನ್ನು ತೆರೆದಳು ಸಕ್ಕೂ. ಹಿಂದೆಯೇ ನೀನಾ–ಮೀನಾ ಹೊರ ಬಂದರು. ಒಡಲ ಹಸಿವೆ–ಮನದ ಆಕರ ಕಣ್ಣುಗಳಲ್ಲಿ ತೆರೆಯ ಹಿಂದೆ ಹಣಕಿದ ರಮಣಿಯಂತೆ ನಿಣುಕುತ್ತಿದೆ.

ಚಂದ್ರಿಯ ಕಣ್ಣುಗಳು ನೋಡಲಾರದೇ ನೋಡಿದರೆ ಮೋಹಿನಿಯ ಕಣ್ಣು ಮುಖಗಳು ತೆಕ್ಕನೆ ರಂಗು ತಳೆದುವು.

"ಅಮ್ಮಾ ಬಂದ್ಲು! ಅಮ್ಮಾ ಬಂದ್ಲು!" ಕೈ ಚಪ್ಪಾಳೆ ತಟ್ಟಿದರು ನೀನಾ-ಮೀನಾ.

ಚಂದ್ರಿ ಕೈಗಡವಾಗಿ ಕೊಟ್ಟ ರಾಗಿ ಹಿಟ್ಟು ಮಧ್ಯಾಹ್ನದ ಗಂಜಿಗೆ ಆಸರೆಯಾಯಿತು.

ಮೋಹಿನಿ ಮಕ್ಕಳಿಗೆ ಹೇಳಿ ಬೇಕರಿಗೆ ಹೊರಟಳು. ಮೇಲೆ ರಣ ರಣಿಸುವ ಬಿಸಿಲು. ತಲೆ ಮುಖ ಬೆವರಿ ಧಾರೆಧಾರೆಯಾಗಿಳಿಯಿತು ನೀರು. ಒರಸಿದಷ್ಟೂ ಮುಖ ತೊಯ್ಯುತ್ತಲೇ ಇದೆ. ತಲೆಯ ಮೇಲೆ ಸೆರಗು ಹೊದ್ದರೂ ನೆತ್ತಿಯುರಿ ತಪ್ಪಲಿಲ್ಲ.

ಬೇಕರಿ ಮುಟ್ಟುವವರೆಗೂ ಬೆಳಗಿನ ಪ್ರಕರಣ ಮೈಗೆ ಚಳಿ ಹಿಡಿಸುವಂತೆ ದೃಷ್ಟಿ ಕಕ್ಷೆಯಲ್ಲಿ ಸುಳಿಸುಳಿದಳಿಯುತ್ತಿತ್ತು. ತನ್ನ ಜೀವಮಾನದಲ್ಲಿ ಇದೇ ಪ್ರಥಮ ಅನುಭವ. ಗೋಪು ಹೇಗೆ ಚಕ್ಕನೆ ಹಣ ಹಾರಿಸಿದ ಎಂಬುದು ಅಚ್ಚರಿಯಾಗಿತ್ತು. ಇಂದು ಎಂತಹ ದೃಷ್ಟಾಂತ!

ಬೇಕರಿ ಮೆಟ್ಟಿಲು ಹತ್ತುವಾಗ ಯಜಮಾನರ ದರ್ಶನವಾಯಿತು. ಈ ಸ್ಥೂಲ ಶರೀರವನ್ನು ನೋಡಿದರೆ ಏನೋ ಒಂದು ಬಗೆಯ ಗೌರವ. ತನ್ನ ತಂದೆಯ ದೇಹ ಪ್ರಕೃತಿಯೂ ಸ್ಥೂಲವೇ. ಆದರಿಂದಲೋ......ಅಥವಾ ಮತ್ತಾವ ಸದ್ಭಾವ ದಿಂದಲೋ......ಅಥವಾ ಇನ್ನಾವ ಜನ್ಮದ ಬಾಂಧವ್ಯದಿಂದಲೋ ಗೌರವ ಭಾವನೆ ಇರುವುದಂತೂ ನಿಜ. ಅದೇನೇ ಇರಲಿ, ಹಿರಿಯ ವ್ಯಕ್ತಿ, ಹಿರಿಯ ಗುಣ. ಶುದ್ಧ ಚಾರಿತ್ರ್ಯ ಇವಿಷ್ಟೇ ಸಾಕಲ್ಲ, ಮಾನವೀಯತೆಯ ಸಾಕ್ಷಿಯಾಗಿ......

ಮೋಹಿನಿ ವಂದನೆಯನ್ನರ್ಪಿಸಿ ಒಳ ಹೋದಳು. ಕೆಲಸ ಏಕ ಪ್ರಕಾರವಾಗಿ ಸಾಗಿತು. ಚುರುಕುಸ್ವಭಾವ–ಅಚ್ಚುಕಟ್ಟು–ಯಾಂತ್ರಿಕ ಶಕ್ತಿಗೆ ಉಪಮಾನವಾಗುವಷ್ಟು ಹಿತ.

ಅವಳು ಕೆಲಸ ಪೂರೈಸಿ ಹೊರಡುವ ಮುನ್ನ ಬೆಳಿಗ್ಗೆ ತನ್ನ ಹಣ ಕಳುವಾದ ಪ್ರಕರಣವನ್ನು ಯಜಮಾನಿಯ ಬಳಿ ಹೇಳಿಕೊಂಡಾಗ "ಪಾಪ! ಬಲು ನತದೃಷ್ಟೆ" ಎಂದು ಮರುಕ ತೋರಿ ಉಳಿಕೆಪಳಿಕೆಯನ್ನು ಜಾಸ್ತಿಯಾಗಿಯೇ ತುಂಬಿಕೊಟ್ಟು ಕೈಗೆ ಐವತ್ತು ರೂಪಾಯಿಯ ನೋಟನ್ನು ಇಟ್ಟು "ಇದು ಸಾಲವೂ ಅಲ್ಲ; ಸಂಬಳವೂ ಅಲ್ಲ; ನಿನ್ನ ತಬ್ಬಲಿ ಮಕ್ಕಳಿಗಾಗಿ....." ಎಂದಳು.

ಮೋಹಿನಿಗೆ ಹೇಗೆ ಕೃತಜ್ಞತೆ ತೋರಬೇಕೋ ತಿಳಿಯಲಿಲ್ಲ. ಕಣ್ಣುಗಳಲ್ಲಿ ನೀರಾಡಿತು. ಏನು ಹೇಳಲೂ ತೋರದೆ "ತುಂಬಾ ವಂದನೆಗಳು!" ಎಂದಳು.

"ಚಿಂತೆ ಮಾಡಬೇಡ; ಅಸಂತೋಷಂ ಶ್ರೀಯೋರ್ಮೂಲಂ ಎನ್ನುತ್ತದೆ ಸುಭಾಷಿತ."

ಮೋಹಿನಿ ಮತ್ತೊಮ್ಮೆ ವಂದನೆಯನ್ನರ್ಪಿಸಿ ಮನೆಯ ಹಾದಿ ಹಿಡಿದಳು. ದಂಪತಿಗಳಿಬ್ಬರೂ ಎಂತಹ ಉದಾತ್ತಗುಣಿಗಳು......ದೇವರು ಅವರನ್ನು ಸದಾಕಾಲ ಚೆನ್ನಾಗಿಟ್ಟಿರಲಿ! ಎಂದು ಹಾರೈಸಿದುವು ಮನಃ ಪ್ರಾಣಗಳು.

ಹಸಿದ ಮಕ್ಕಳು ತಾಯಿಗಾಗಿಯೇ ಕಾಯುತ್ತಿವೆ. ಮೋಹಿನಿ ಲಗುಬಗನೆ ಕೈ ಕಾಲು ತೊಳೆದು ಮಕ್ಕಳಿಗೆ ಉಣಿಸಿಟ್ಟು ಮಿಕ್ಕಿದುದನ್ನು ಮರುದಿನಕ್ಕೆಂದು ಮುಚ್ಚಿಟ್ಟು ಹಾಸಿಗೆ ಹಾಸಿದಳು. ಹೊರ ಬಾಗಿಲು ಒಳಬಾಗಿಲುಗಳನ್ನು ಭದ್ರಪಡಿಸಿ ಮಲಗಿದಾಗ ಇನ್ನು ಒಂಭತ್ತು ಗಂಟೆ. ಒಳ್ಳೆಯ ಪುಸ್ತಕಗಳೋ ವರ್ತಮಾನ ಪತ್ರಿಕೆಗಳೋ ಇದ್ದಿದ್ದರೆ ಓದಿ ಮಲಗಬಹುದಾಗಿತ್ತು ಎಂಬ ಯೋಚನೆ......ಆದರೆ, ಎಲ್ಲಿಯ ಪುಸ್ತಕ?

ಬಹಳ ಹೊತ್ತಿನ ಮೇಲೆ ನಿದ್ದೆ ಹತ್ತಿತು.

ಕನಸಿನ ಲೋಕದಲ್ಲಿ ವಸಂತ್ ಮುಂದೆ ನಡೆಯುತ್ತಿದ್ದಾನೆ. ದೂರದೂರದ ಹಾದಿ. ಮುಂದೆ ನಡೆಯುತ್ತಿದ್ದ ಅವನು ಹಿಡಿದುದು ಕವಲು ಹಾದಿ. ಅದೇ ಉಡುಪು, ನೆಹರು ಬನಿಯನ್, ಪಾಯಿಜಾಮ, ಗಾಳಿಗಾಡುವ ಮುಂಗುರುಳು. ತಾನವನನ್ನು ನಡಿಗೆಯಲ್ಲಿ ಸರಿಗಟ್ಟಲಾರೆ ನಿಜ. ಆದರೆ, ಆ ಭೂಪ ಒಮ್ಮೆ ಯಾದರೂ ತಿರುಗಿ ನೋಡಬಾರದೇ? ಸಹಾಯಹಸ್ತ ಚಾಚಬಾರದೇ? ಉಹೂ; ಇಲ್ಲವೇ ಇಲ್ಲ. ಬಹುಶಃ ನಾನು ಹಿಂಬಾಲಿಸುತ್ತಿರುವುದನ್ನು ಕಾಣನೆ? ಅವನ ಮುನ್ನಡೆ ಜಗತ್ತನ್ನೇ ಮರೆಸಿರಬಹುದು.......ಎಷ್ಟಾದರೂ ಗಂಡು ಜನ್ಮ! ಛೀ! ಕೊಸರಾಡಿ ಎದ್ದಳು ಮೋಹಿನಿ.

ಎಲ್ಲಿದ್ದಾನೆ ವಸಂತ್ ? ಕನಸು, ಬರೀ ಕನಸು. ಹೋಗಲಿ ಕನಸಿನಲ್ಲಾದರೂ ಕಾಣುತ್ತಾನಲ್ಲ !

೧೩

ಸುಮನಾ ಅಣ್ಣನಿಗೆ ಮದುವೆಯ ಪ್ರಸ್ತಾಪ ನಡೆಯುತ್ತಿದ್ದಂತೆ ಸುಮನಳ ಮನಃಪ್ರಾಣಗಳು ಗರಿಗೆದರಿದ ಹಕ್ಕಿ. ಸ್ವತಂತ್ರ ಬಾಳಿನ ಗೀಳು. ಮದುವೆಯಾಗಿ

ಹೊಸ್ತಿಲು ದಾಟಿದ ಹೆಣ್ಣು ಮನೆಗೆ ಮರಳಿ ಮಾರಿಯಾಗಬಾರದು.....ಎಂದು ವಿವೇಚನೆ ಬಂಡೆದ್ದರೆ ಮನಸ್ಸು ನೀರಿನಿಂದ ಹೊರತೆಗೆದ ಮೀನು. ಮುಂದೇನು? ಎಂಬ ಪ್ರಶ್ನೆ ಮಾನಸಿಕ ಹಿಂಸೆ.

ಬಾಲವಾಡಿಗಾಗಿ ಎಷ್ಟೆಷ್ಟು ಹುಡುಕಿದರೂ ತಮ್ಮ ತಮ್ಮ ಅಳತೆಗೆ ತಕ್ಕಂತೆ ಸೂಕ್ತ ಸ್ಥಳ ದೊರೆಯಲಿಲ್ಲ. ಮಗಳ ಚಡಪಡಿಕೆಯನ್ನು ಕಂಡು ನುಡಿದಳು ತಾಯಿ "ತೀರಾ ತರಾತುರಿ ಮಾಡಿ ಕೆಲಸ ಕೆಡಿಸಿಕೊಳ್ಳಬೇಡ. ಹೇಗಾದರೂ ಸುಧಾರಿಸಿ ಕೊಳ್ಳಬೇಕು. ಸ್ವಲ್ಪಕಾಲ ತಾಳಿಕೊ. ಸರಿಯಾಗಿ ನೆಲೆಗೊಳ್ಳುವಂತಿಲ್ಲದೆ ಹೊರ ಹೊರಟರೆ ನಗೆಗೇಡು."

"ಅದು ನನಗೂ ಗೊತ್ತು. ದೇವರು ಏಕೆ ಇಷ್ಟು ನಿರ್ದಯನೋ ನನಗೆ ಅರ್ಥವಾಗುವುದಿಲ್ಲ. ಯಾವೊಂದು ಕೆಲಸವೂ ಸುಸೂತ್ರವಾಗಿ ಕೈಗೂಡುವುದಿಲ್ಲ ಅದೇ ಈಗ ಬಂದಿರುವ ಕಷ್ಟ. ನಾವೊಂದು ನೆನೆದರೆ ದೈವವೊಂದು ನೆನೆಯುತ್ತೆ."

"ಅದರಿಂದಲೇ ಎಚ್ಚರಿಕೆ ಹೇಳಿದ್ದು. ಗ್ರಹಗತಿ ಚೆನ್ನಿಲ್ಲವಾದಾಗ ಅವಸರ ಒಳ್ಳೆಯದಲ್ಲ."

"ಅದು ಸರಿಯೆ......."

ಗೋಡೆಯ ಮೇಲಿನ ರೋಲೆಕ್ಸ್ ಗಡಿಯಾರ ಅಣಕಿಸುವಂತೆ ಟಿಕ್. ಟಾಕ್. ಟಿಕ್. ಟಾಕ್ ಚಲನಗತಿಯಲ್ಲಿ ಮುನ್ನಡೆಯುತ್ತಲೇ ಇದೆ. ಮನಸ್ಸಿಗೂ ಅದಕ್ಕೂ ಸ್ಪರ್ಧೆ ಹೂಡಿದಷ್ಟು ಸರಾಸರಿ. ಶಾಲೆಗೆ ಹೊತ್ತಾಯಿತೆಂದು ಗಂಟೆಯ ಸೂಚನೆ. ತಾನಾದರೂ ಇನ್ನೂ ತಯಾರಾಗಿಲ್ಲ.

ಅಂತೂ, ಕೊನೆಗೊಮ್ಮೆ ಹೊರಟಾಗ ಹೊತ್ತು ಮೀರಿರಲಿಲ್ಲ. ತಾನೇ ಗೆದ್ದೆ ಎಂದುಕೊಂಡು ಮೆಟ್ಟಲಿಳಿದಳು. ಮನೆಯಿಂದ ಒಂದು ಫರ್ಲಾಂಗ್ ದೂರದಲ್ಲಿ ಶಾಲೆ. ಮಕ್ಕಳು ಗುಂಪು ಗುಂಪಾಗಿ ಬರುತ್ತಲೇ ಇದ್ದಾರೆ. ಸಹೋದ್ಯೋಗಿಗಳೂ ಆಗಮಿಸುತ್ತಿದ್ದಾರೆ. ಶಾಲೆಯ ಖಜಾನೆ ಭರ್ತಿಯಾಗಿದ್ದರೂ ಶಾಲೆಗೆ ಜೀವಕಳೆ ಇಲ್ಲವೇ ಇಲ್ಲ. ತುಂಬು ಹೃದಯದ ಮಕ್ಕಳು ತುಂಬಿದಾಗ ಹೊರತು ಎನ್ನ ಬಹುದು. ಗೋಡೆಯಲ್ಲಿ ಬಿರುಕು, ಕಳಚಿ ಬಿದ್ದಸಾರಣೆ, ಅಂಕು ಡೊಂಕಾದ ಹೆಂಚಿನ ಮಾಡು. ಪೀಠೋಪಕರಣಗಳು ಅಷ್ಟಕಷ್ಟೆ. ಖಜಾನೆಯಲ್ಲಿ ಇಲಿ ಹೆಗ್ಗಣಗಳು ಸೇರಿರುವುದರಿಂದ ಆರ್ಥಿಕ ಅಡಚಣೆ, ಸಹಕಾರದ ಕೊರತೆ. ಇಂತಿಂಥ ಪರಿಪಾಡಿನಿಂದ ಮಾನಗೇಡು, ಜ್ಞಾನಗೇಡು; ಲೋಕ ಪ್ರಜ್ಞೆ ಇನಿತೂ ಇಲ್ಲದವರ ಕೂಟ ಪ್ರಾಣ ಹಿಂಸ್ರಕ.......ಮನಸ್ಸು ಚೀರುತಿತ್ತು. ಸುಮನಾ

ತಲೆಬಾಗಿ ಹೆಜ್ಜೆ ಹಾಕಿದಳು, ಮೆಟ್ಟಿಲು ಹತ್ತುತ್ತಿದ್ದಂತೆಯೇ ಎದುರಾದ ಪ್ರಿನ್ಸಿಪಾಲ್ "ನಿಮ್ಮ ಮಕ್ಕಳು ಎಲ್ಲಿ ಓದುತ್ತಿದ್ದಾರೆ?" ಎಂದರು.

"ಮನೆಯ ಹತ್ತಿರ ಕ್ವೀನ್ ಕಾನ್ವೆಂಟಿನಲ್ಲಿ."

"ನೀವಿಲ್ಲಿರುವಾಗ ನಿಮ್ಮ ಮಕ್ಕಳು ಇಲ್ಲಿ ತಾನೆ ಓದಬೇಕಾದುದು ಸುಮನಾ?"

"ಮಕ್ಕಳು ಚಿಕ್ಕವರು. ಮನೆಗೆ ಅದು ಹತ್ತಿರ ಸರ್!"

"ಹಾಗೋ......?"

ಅವರು ಹೊರಟರು.......ಇಂಥ ಹೀನ ಶಾಲೆಗೆ ಸೇರಿಸು ಎನ್ನುತ್ತಾರಲ್ಲವೇ? ನಾಚಿಕೆ ಏಕಿಲ್ಲ? ಎಂದಿತು ಮನಸ್ಸು; ಇವರೆಲ್ಲಾ ವಿದ್ಯಾವಂತರು ಎಂದು ಚೀರಿತು ಎದೆಯ ಹಕ್ಕಿ. ಸುಮನಾ ನಿಟ್ಟುಸಿರುಬಿಟ್ಟು ಹೃನ್ಮನಗಳ ಟೀಕೆಯನ್ನು ಗಮನಿಸುತ್ತ ತನ್ನ ತರಗತಿಗೆ ಪದಾರ್ಪಣೆ ಮಾಡಿದಳು. ಭಾರಭಾರವಾದ ದೇಹವನ್ನು ಹೊರಲಾರದೆ ಹೊತ್ತ ಕಾಲುಗಳು ಬಳುಕಿದುವು. ಎಂಟನೆಯ ತರಗತಿಯ ಮಕ್ಕಳು... ಸಮವಸ್ತ್ರದಿಂದ ಶೋಭಿತರಾದ ಪೆಣ್ಮಣಿಗಳ ಸಮುಚ್ಚಯ. ಕಪ್ಪು ಕೂದಲ ಹೇರಾಶಿ. ದುಂಬಿಗಂಗಳ ಹೊಳಪು. ಮುಗ್ಧದುಗ್ಧಭಾವದ ಮುಖ ಮುದ್ರೆ. ಆಸೆ–ಆಕಾಂಕ್ಷೆಗಳ ವರ್ತುಲದಲ್ಲಿ ನಿಗಿನಿಗಿ ನಲಿಯುವ ಜೀವ ಕಣಗಳು. ಒಮ್ಮೆ ನೋಟ ತರಗತಿಯ ತುಂಬ ಹರಿದಾಡಿ ಹಿಮ್ಮರಳಿತು.

ಹಾಜರಿ ಪುಸ್ತಕ ತೆಗೆದುಕೊಂಡು ಎಲ್ಲರ ಹೆಸರು ಕರೆದಳು.

"ಸೀತಾ?"

"ಎಸ್ ಮೇಡಂ!" ಸೀತಾ ಕೈಯೆತ್ತಿದಳು.

"ಸಾವಿತ್ರಿ?"

"ಎಸ್ ಮೇಡಂ!" ಸಾವಿತ್ರಿ ಕೈಯೆತ್ತಿದಳು.

"ಸಾವಿತ್ರಿ ಪೈ?"

"ಎಸ್ ಮೇಡಂ!" ಮೊದಲ ಸಾವಿತ್ರಿಯೇ ಕೈಯೆತ್ತಿದುದು ಕಂಡು ಬಂತು.

"ಇದೇನಮ್ಮಾ? ಸಾವಿತ್ರಿ ಪೈ ಎಲ್ಲಿ?"

"ಅವಳು ಬರುವಾಗ ಕಲ್ಲೆಡವಿ ಹೆಬ್ಬೆರಳಿಗೆ ಪೆಟ್ಟು ತಾಗಿತು. ಡಾ|| ಪ್ರಭು ಕ್ಲಿನಿಕ್‌ಗೆ ಹೋಗಿದ್ದಾಳೆ. ಉಗುರು ಕಿತ್ತುರಕ್ತ ಹರಿದಿದೆ. ಅಲ್ಲಿಂದ ಹೀಗೆಯೇ ಬರುತ್ತಾಳೆ. ಆದ್ದರಿಂದ ನಾನೇ ಹಾಜರಿಗೆ ಕೈಯೆತ್ತಿದೆ."

ಸುಮನಾ ಸುಮ್ಮನಾದಳು. ಎಲ್ಲರ ಹೆಸರು ಕರೆದ ನಂತರ ಪುರಾತನ

ಪತಿವ್ರತಾ ಶಿರೋಮಣಿ ಸತೀ ಸಾವಿತ್ರಿಯ ಕಥಾ ನಿರೂಪಣೆ :

....ಪುರಾತನ ಕಾಲದಲ್ಲಿ ಹೆಣ್ಣಿಗೆ ಎಷ್ಟು ಮಾನ್ಯತೆಯಿತ್ತು? ಎಷ್ಟು ಸ್ವಾತಂತ್ರ್ಯವಿತ್ತು ಎಂಬುದು ಸತೀ ಸಾವಿತ್ರಿ ಕಥೆಯಿಂದ ಅರ್ಥವಾಗುತ್ತದೆ. ಅಶ್ವಪತಿ ಮಹಾರಾಜನಿಗೆ ಸಾವಿತ್ರಿ ಏಕಮಾತ್ರ ಪುತ್ರಿ. ಅವಳು ಪ್ರೌಢ ವಯಸ್ಕಳಾದಾಗ ಅವಳಿಗೆ ತಕ್ಕ ವರನನ್ನು ಅರಸಿ, ಎಲ್ಲಿಯೂ ದೊರೆಯದಿರಲು ಅವಳನ್ನೇ ಹುಡುಕಿಕೊಂಡು ಬರಲು ಪ್ರೋತ್ಸಾಹಿಸಿ ಕಳುಹಿಸಿದ ಮಹಾರಾಜ. ಅವಳು ತೀರ್ಥಯಾತ್ರೆ ಮಾಡಿದ ನಂತರ ತಪೋವನದ ಕಡೆಹೋದಳು. ಜೊತೆಗೆ ಪರಿವಾರವಿತ್ತು ಅನ್ನಿ. ಆ ಕಾಲದಲ್ಲಿ ಮಗಳನ್ನೇ ಕಳುಹಿಸಿದರು ಎಂದರೆ ಎಷ್ಟು ಸ್ವಾತಂತ್ರ್ಯವಿತ್ತು ಯೋಚಿಸಿ ನೋಡಿ.

ಬರಬರುತ್ತ ಪರಮ ಸ್ವಾರ್ಥಿ, ಪುರುಷವರ್ಗದಿಂದ ಸ್ತ್ರೀದಮನ ಆರಂಭವಾಗಿ ಈ ಕಲಿಯುಗದಲ್ಲಿ ನೆಲೆನಿಂತುಬಿಟ್ಟಿದೆ. ಇರಲೀ, ಸಾವಿತ್ರಿ ಮುನಿ ಋಷಿಗಳ ಸೇವೆ ಮಾಡಿದಳು. ಆ ದಿನಗಳಲ್ಲಿ ತಪೋವನದಲ್ಲಿದ್ದ ಸಾಲ್ವರಾಜನ ತೇಜಸ್ವೀ ರಾಜಕುಮಾರನನ್ನೂ ಕಣ್ತುಂಬ ನೋಡಿದಳು. ಹೃದಯ ಒಲಿಯಿತು. ಮನಸ್ಸೊಪ್ಪಿತು. ಅಷ್ಟೇ ಪ್ರೀತಿ ವಿಶೇಷದಿಂದ ಸಂತುಷ್ಟನಾಗಿ ಒಪ್ಪಿಕೊಂಡ ಸತ್ಯವಾನ. ಸಾವಿತ್ರಿಯು ಪುರಕ್ಕೆ ಹಿಂದಿರುಗಿ ಮಾತಾಪಿತೃಗಳಿಗೆ ವಿಷಯವನ್ನು ಪೂರ್ಣಮನದಿಂದ ವರದಿ ಮಾಡಿ ಮದುವೆ ನಿಶ್ಚಯಿಸಿ ಎಂದು ಕೇಳಿಕೊಂಡಳು. ರಾಜ್ಯಹೀನ ಮಹಾರಾಜ ಎಂದಾಗಲೇ ಕಿನಿಸಿಗೆ ಅಶ್ವಪತಿಗೆ. ಅದೇ ವೇಳೆಗೆ ನಾರದ ಮಹರ್ಷಿಗಳು ಆಗಮಿಸಿದರು. ಅವರು ಸತ್ಯವಾನನ ವಿಚಾರವನ್ನು ದಿವ್ಯದೃಷ್ಟಿಯಿಂದ ಅರಿತು "ಅವನಿಗೆ ಇನ್ನೊಂದು ವರ್ಷ ಮಾತ್ರ ಆಯಸ್ಸಿದೆ. ಮುಂದಿನ ವರ್ಷದಲ್ಲಿ ಇದೇ ದಿನ ಮರಣ ಸಂಭವಿಸುತ್ತದೆ" ಎಂದರು. ಆಗ ಹೆತ್ತವರ ಮನದಲ್ಲಿ ಇನ್ನಷ್ಟು ಗೊಂದಲ. ಆದರೂ, ಸಾವಿತ್ರಿ ತನ್ನ ದೃಢ ಸಂಕಲ್ಪದಿಂದ ಕಿಂಚಿತ್ತೂ ಹಿಂಜರಿಯಲಿಲ್ಲ.

"ಏನೇ ಬರಲಿ. ಒಮ್ಮೆ ಮನವೊಪ್ಪಿದ ನಂತರ ಬದಲಿಸಲಾರೆ" ಎಂದುಬಿಟ್ಟಳು.

"ಬೇರೆ ಯಾರನ್ನಾದರೂ ಆರಿಸಿಕೊ" ಎಂದು ನಾರದರೂ, ತಂದೆ ತಾಯಿಗಳೂ ಕೇಳಿಕೊಂಡರೂ ಅವಳು ಸುತರಾಂ ಒಪ್ಪಲಿಲ್ಲ. ಮಗಳ ಇಚ್ಛೆ ಪ್ರಕಾರ ಮದುವೆ ನಡೆಯಿತು. ಅವಳು ಅರಮನೆಯನ್ನು ಬಿಟ್ಟು ಪರ್ಣಕುಟೀರವನ್ನು ಸೇರಿ ಹಣ್ಣು ಹಂಪಲು ಕಂದಮೂಲಾದಿಗಳನ್ನು ತಿಂದು ದುರ್ಗಾವ್ರತ ಹಿಡಿದು ಅತ್ತೆಮಾವಂದಿರ ಸೇವೆ ಮಾಡುತ್ತ ಸಂತೋಷದಿಂದ ಕಾಲಹರಣ ಮಾಡಿದಳು.

"ಅವಳ ವ್ರತನಿಷ್ಠೆ, ಧರ್ಮನಿಷ್ಠೆ ಹೇಗೆ ಅವಳ ಪತಿಯನ್ನು ಕಾಪಾಡಿತು ಎಂಬುದನ್ನು ಎಲ್ಲರೂ ತಿಳಿದಿರಬೇಕು. ವರ್ಷ ತುಂಬಿತು. ಸತ್ಯವಾನ ಸೌದೆ ಕಡಿಯಲು ಕಾಡಿಗೆ ಹೊರಟ. ಅವಳು ಹಿಂಬಾಲಿಸಿದಳು. ಪತಿ ಬೇಡವೆಂದರೂ ಕೇಳಲಿಲ್ಲ. ಆವನು ಸೌದೆ ಕಡಿದ ನಂತರ ತನಗೆ ತಲೆ ಸುತ್ತುತ್ತಿದೆ ಎಂದ. ಸಾವಿತ್ರಿ ನೆಲದಮೇಲೆ ಕುಳಿತುಕೊಂಡು "ತೊಡೆಯ ಮೇಲೆ ತಲೆಯಿರಿಸಿ ಮಲಗಿಕೊ" ಎಂದಳು. ಯಮಧರ್ಮರಾಯ ಆಗಮಿಸಿದ. ಮನುಷ್ಯಾಕೃತಿಯ ಕಪ್ಪು ಛಾಯೆ ಕಂಡಿತು. ಸಾವಿತ್ರಿ ಪತಿಯನ್ನು ತಬ್ಬಿಹಿಡಿದುಕೊಂಡು 'ಮಹಾತ್ಮನೇ! ನೀನು ಯಾರೇ ಆಗಿರು; ನನ್ನ ಪತಿಗೆ ತೊಂದರೆಯನ್ನುಂಟು ಮಾಡಬೇಡ. ಕೈಮುಗಿದು ಕೇಳಿಕೊಳ್ಳುವೆ" ಎಂದು ಬೇಡಿಕೊಂಡಳು.

"ಮಗಳೇ, ಸಾವಿತ್ರಿ! ನಿನ್ನ ಪತಿಯ ಆಯಸ್ಸು ಮುಗಿಯಿತು. ನೀನು ಇನ್ನು ಅತ್ತೆಮಾವಂದಿರ ಸೇವೆಮಾಡಿಕೊಂಡು ಪುನೀತಳಾಗು" ಎಂದ ಯಮಧರ್ಮರಾಯ.

ಸಾವಿತ್ರಿ ಒಪ್ಪಲಿಲ್ಲ. ಇಬ್ಬರಿಗೂ ತುಂಬಾ ಮಾತುಕತೆಗಳಾದುವು. ಆ ಚರ್ಚೆಯಲ್ಲಿ ಯಮಧರ್ಮರಾಯನೇ ಸೋತು ಹೋದ. ಕೊನೆಗೆ ಆವಳಿಗೆ ಪತಿಯ ಪ್ರಾಣವನ್ನು ಬಿಟ್ಟುಕೊಟ್ಟು ಬಾಯಿ ತುಂಬಾ ಹರಸಿದ. ಇದರಿಂದ ನಾವು ಯೋಚಿಸಬೇಕಾದುದು ಧರ್ಮನಿಷ್ಠೆ-ವ್ರತನಿಷ್ಠೆಗಳಿಂದ ಎಂತಹ ಕಾರ್ಯಸಾಧನೆ ಮಾಡಬಹುದು ಎಂಬುದು. ಧರ್ಮನಿಷ್ಠೆ ಯಾವತ್ತೂ ನಮ್ಮನ್ನು ಕಾಪಾಡುತ್ತದೆ, ಎಂಬುದನ್ನು ಎಲ್ಲರೂ ಮನಗಾಣಲೇಬೇಕು.

ಸುಮನಾ ಪಾಠ ಮುಗಿಸುವ ಮುನ್ನ ನುಡಿದಳು "ಕಾಲ ಪ್ರವಾಹವೆಂಬುದು ಯಾರಿಗೂ, ಯಾವ ಕಾರಣಕ್ಕೂ ನಿಲ್ಲುವುದಿಲ್ಲ. ಅದನ್ನು ಸರಿಗಟ್ಟಬೇಕಾದರೆ ನಾವು ನಾಗಾಲೋಟದಿಂದ ಓಡಬೇಕು. ಹಾಗೆ ಓಡಿದರೇನೇ ಗುರಿಮುಟ್ಟಬೇಕಾದರೆ. ಇಲ್ಲವಾದರೆ ನಾವು ಇಲ್ಲೇ. ಕಾಲ ಇನ್ನೆಲ್ಲೋ."

* * *

ಹೊತ್ತು ಉರುಳಿತು. ಮಧ್ಯಾಹ್ನ ಅಡರುತ್ತಿದೆ.

ಶಾಲೆಯ ಗಂಟೆ ಬಾರಿಸಿತು. ಠಣ್. ಠಣ್. ಠಣ್. ಠಣ್. ಬಾರಿಸುತ್ತಲೇ ಇದೆ ಸಮಯ ನಿಷ್ಠೆಯನ್ನು ಸಾರಿಹೇಳುವಂತೆ.

ತರಗತಿಗಳಿಂದ ಹುಡುಗಿಯರೆಲ್ಲಾ ಹೊರಬಿದ್ದು ತಮ್ಮ ತಮ್ಮ ಹಾದಿ ಹಿಡಿದರು.

ಸುಮನಾ ಕಾರಿಡಾರಿನಲ್ಲಿ ಹೆಜ್ಜೆ ಹಾಕುತಿದ್ದಂತೆ ಎದುರಾದ ಪ್ರಿನ್ಸಿಪಾಲ್

ಗೋಸ್ವಾಮಿ "ಏನಮ್ಮಾ, ಮನೆ ಕಡೆಗೆತಾನೇ?" ಎಂದರು.

"ಹೌದು ಸರ್! ಆಫೀಸಿನಲ್ಲಿ ಏನಾದರೂ ಕೆಲಸ ಇದೆಯೇ?"

"ಇಂದೇನೂ ಇಲ್ಲ. ಕ್ರಿಸ್‌ಮಸ್ ಕಾರ್ಡುಗಳನ್ನು ಕೆಲವು ಹುಡುಗಿಯರು ಚಿತ್ರಿಸಿ ಕೊಡುವುದಾಗಿ ಹೇಳುತಿದ್ದಾರೆ. ಅದರ ಪರಿಶೀಲನೆ ಮತ್ತು ಅವರಿಗೆ ಮಾರ್ಗದರ್ಶನ ಮಾಡುವುದು ಉಂಟು. ಮುಂದಿನ ವಾರದಿಂದ ಸ್ವಲ್ಪನೋಡಿ ಕೊಳ್ಳಬೇಕಾಗುತ್ತೆ."

"ಆಗಲಿ........"

ಆದರೆ, ಅವರ ದುರ್ವ್ಯವಹಾರವನ್ನು ನೆನೆಸಿಕೊಂಡರೆ ಮೈಯೆಲ್ಲಾ ಉರಿ. ಏನೇ ಇರಲಿ, ಇಲ್ಲಿ ಇರುವಷ್ಟು ಕಾಲ ಪ್ರತಿಯೊಂದಕ್ಕೂ ತಲೆಬಾಗಲೇ ಬೇಕು ಎಂಬುದು ಆತ್ಮಗತ. ಸುಮನಾ ಅಲ್ಲಿಂದ ಜಾರಿದಳು. ಯಾವತ್ತೂ ಅಷ್ಟೆ. ಯಾವ ಯಾವುದೋ ಹೆಚ್ಚಿನ ಕೆಲಸ ಇದ್ದೇ ಇರುತ್ತದೆ. ಅದರ ಬಗ್ಗೆ ಸಹಾನುಭೂತಿಯಾಗಲೀ ಹೆಚ್ಚಿನ ಪಗಾರವಾಗಲೀ ಇಲ್ಲವೇ ಇಲ್ಲ. ಆತ ಹಣ ನುಂಗಿ ನುಂಗಿ ಹಣದ ಕೋಟೆಯೇ ಆಗಿದ್ದಾನೆ. ಸರಕಾರ ಕಣ್ಣಿದ್ದೂ ಕುರುಡು. ಕಿವಿಯಿದ್ದೂ ಕಿವುಡು....

ಆವುದೋ ಅಶರೀರವಾಣಿ ಕಿವಿಯ ಸನಿಹದಲ್ಲಿಯೇ ಕೂಗಿ ಹೇಳಿತು.

ಶಾಲೆಯ ಆವರಣವನ್ನು ದಾಟಿ ರಸ್ತೆಗೆ ಕಾಲಿಟ್ಟಾಗ ಹಿಂದಿನ ಘಟನೆಯೊಂದು ಚಿತ್ತಭಿತ್ತಿಯಲ್ಲಿ ಸುಳಿಸುಳಿದಳಿಯಿತು....ಕಮಲಾ....ಮೋಹಿನಿಯ ರೊಂದಿಗೆ ತಾನೂ ಕಾಲೇಜಿನಲ್ಲಿ ಓದುತಿದ್ದಾಗಿನ ಸಂದರ್ಭ. ಮೂವರೂ ಲಂಚ್ ಬಾಕ್ಸ್ ಬಿಚ್ಚಿದ್ದಾರೆ. ಇವರಿಬ್ಬರದು ಊಟ ತುಂಬಿದ್ದರೆ ಮೋಹಿನಿಯದು ಎಲ್ಲೋ ಚೂರುಪಾರಿನಿಂದ ಕೂಡಿತ್ತು.

"ಏನಮ್ಮಾ ಇಷ್ಟೇ ತಂದಿದ್ದಿ ಮೋಹಿನಿ?"

"ಮನೆಯ ಮಕ್ಕಳಿಗೆಲ್ಲಾ ಲಂಚ್ ಬಾಕ್ಸ್ ಕಟ್ಟಿದೆ. ಅಡಿಗೆ ಮುಗಿದು ಹೋಯ್ತು. ಉಳಿದುದು ಇಷ್ಟೆ."

"ಬೆಳಿಗ್ಗೆ ತಿಂಡಿ ಮಾಡಿರಲಿಲ್ಲವೇ, ಅದನ್ನೇ ತುಂಬಿಕೊಂಡು ಬರಬಾರದಿತ್ತೇ?"

"ಬಿಡು, ಅದಕ್ಕೆಲ್ಲಾ ಅವಕಾಶವಿಲ್ಲ."

"ಅಂದರೆ?"

"ಕೆಟ್ಟಮಾತು. ಊಟಕ್ಕೆ ಚಕ್ರ. ಅಪ್ಪ ಅಮ್ಮನಿಗೆ ಎಲ್ಲಿಲ್ಲದ ಗೋಳು. ಇದೆಲ್ಲ ಏಕೆ ಬೇಕು ಹೇಳು?"

"ನೀನು ಹೊಟ್ಟೆಗಿಲ್ಲದೆ ಓದುವುದು ಹೇಗೆ? ಮನೆಯಲ್ಲಿ ಕೈ ತುಂಬ

ಕೆಲಸ. ಇದೆಲ್ಲ ಸುಮ್ಮನೆ ಆಗುತ್ತದೆಯೇ?”

“ಏನು ಮಾಡ್ಲೋಣ. ಅಪ್ಪ-ಅಮ್ಮನ ಗಂಟು ಏನಾದರೂ ಇದ್ದಿದ್ದರೆ ಹೇಗಾದರೂ ಕಳೆಯುತಿತ್ತು. ಅಂಗಡಿ ವ್ಯಾಪಾರ ಅಣ್ಣನ ಕೈಗೆ ಹೋಗಿದೆ. ಈಗ ಅಣ್ಣನೇ ಸರ್ವಾಧಾರ. ಅವನ ಬಳಿ ಫೀಜಗೆ ಕೈಯೊಡ್ಡುವುದೂ ನನಗೆ ಕಷ್ಟವೇ. ಅಪ್ಪ ಅಮ್ಮನಿಗೆ ‘ಪಾಕೆಟ್ ಮನಿ’ ಕೂಡ ದಕ್ಕುವುದಿಲ್ಲ. ಬಾಯಿ ಬಿಟ್ಟು ಕೇಳಿದರೆ ಚಬಕಿನೇಟಿನಂತಹ ಮಾತುಗಳು ಹೊರಬೀಳುತ್ತವೆ. ಇದೆಲ್ಲಾ ಯಾರಿಗೆ ಬೇಕು ಹೇಳು? ಅಪ್ಪ ಸಹ ಕಾಸು ಕೇಳುವುದಿಲ್ಲ. ಇನ್ನು ಬೇರೆಯವರ ಪಾಡೇನು? ಸೀರೆ-ಬಟ್ಟೆ ಎಲ್ಲದಕ್ಕೂ ಕಷ್ಟ” ಎಂದು ಕಣ್ಣೀರು ಮಿಡಿದಳು ಮೋಹಿನಿ.

ಇನ್ನೊಮ್ಮೆ ಅಪ್ಪ-ಅಮ್ಮ ತೀರಿದನಂತರ ಅವಳೇ ನುಡಿದ ಮಾತು.

“ಅಮ್ಮನಿಗೆ ಪ್ರಜ್ಞೆ ಹೋದೊಡನೆಯೇ ತಾಳಿಸರ, ಕೈಬಳೆ, ಓಲೆ, ಮೂಗು ಬೊಟ್ಟು ಎಲ್ಲಾ ಬಿಚ್ಚಿಕೊಂಡಳು ಅತ್ತಿಗೆ. ನಾನೊಬ್ಬ ಬಡಪಾಯಿ ಉಳಿದುಕೊಂಡೆ. ದೇವರು ನನ್ನನ್ನೂ ಅವರೊಂದಿಗೆ ಕರೆದುಕೊಂಡಿದ್ದರೆ ಮುಂದೆ ಬಾಳಿನಭಂಗ ನನಗಿರುತ್ತಿರಲಿಲ್ಲ.”

ಪಾಪ ಕಷ್ಟಗಳು ಬಂದರೆ ಹೀಗೆಯೇ. ಒಂದರ ಮೇಲೊಂದು ಬರುತ್ತಲೇ ಇರುತ್ತವೆ. ದೈವಕ್ಕೆ ಕರುಣೆಯಿಲ್ಲ. ಸುಖವಾಗಿರುವವರು ಸುಖವಾಗಿಯೇ ಇರುತ್ತಾರೆ. ದುಃಖಿತರನ್ನು ಇನ್ನೂ ದುಃಖಿತಗೊಳಿಸುವುದರ ಅರ್ಥವೇನೋ.... ಬಹುಶಃ ನಮ್ಮ ನಮ್ಮ ಕರ್ಮಾಂತರ ವಿಪಾಕ ಎಂದುಕೊಳ್ಳಬಹುದೇನೋ.... ಹಿಂದಿನ ಜನ್ಮದಲ್ಲಿ—ಈ ಜನ್ಮದಲ್ಲಿ ನಾವು ಏನೇನು ಮಾಡಿದ್ದೇವೋ ಅದನ್ನು ತಾನೇ ಉಣ್ಣಬೇಕು ?

ಪ್ರಶ್ನೆ ಎದ್ದಾಗ ಒಂದೆರಡು ಕ್ಷಣ ಕಣ್ಣಿನ ಮೇಲೆ ಕತ್ತಲೆ ಆವರಿಸಿದಂತಾಯಿತು. ಸುಮನಾ ಆಲೋಚನೆಯನ್ನು ಬದಿಗೊತ್ತಿ ತನ್ನನ್ನು ತಾನೇ ಸುಧಾರಿಸಿಕೊಂಡಳು.

## ೧೪

ಮಾಮರದ ನೆತ್ತಿಯಲ್ಲಿ ಹುದುಗಿದ ಕೋಗಿಲೆಯ ಕೂಜನ ಕುಹೂ ಕುಹೂಊ ! ಕುಹೂಊ !

ಮೋಹಿನಿ ಹುಬ್ಬೆತ್ತಿ ನೋಡಿ ಮೆಟ್ಟಲಿಳಿದಾಗ ಮಾಗಿ ಕಾಲದ ಮಂಜು ದಟ್ಟವಾಗಿ ಮುಸುಗಿ ಮಂಜಿನ ತೆರೆಹರಡಿತ್ತು. ಮೈ ಗಡ ಗಡ ನಡುಗಿಸುವ ಚಳಿ. ಮೈಗೊಂದು ಉಣ್ಣೆ ಬಟ್ಟೆಯಿಲ್ಲ. ಮಕ್ಕಳಿಗೂ ಅಷ್ಟೆ. ಗಡಗಡ ನಡುಗುತ್ತಲೇ ಹಾದಿ ಕ್ರಮಿಸುತ್ತಾರೆ. ಮೈ ಕೊರೆಯುವಂತಹ ಶೀತಲ ಗಾಳಿಯ ಹೊಡೆತ. ಉಟ್ಟ ಮಾಸಲು ಸೀರೆಯೇ ಚಿಂದಿ ಚಿಂದಿ. ಸೆರಗು ಎಳೆದು ಹೊದೆಯುವಾಗಲೇ ಪರಪರ ಹರಿಯುತ್ತದೆ. ಕಳೆದ ನಾಲ್ಕಾರು ವರ್ಷಗಳಿಂದ ಸೀರೆ ಕೊಂಡಿರಲಿಲ್ಲ. ಇದ್ದ ಎರಡು ಸೀರೆಗಳಲ್ಲಿಯೇ ಕಾಲಹರಣ. ಇಂಥ ದುರ್ದೆಶೆಯಲ್ಲಿ ಹೊರತಲೆಹಾಕಲು ನಾಚಿಕೆ–ಸಂಕೋಚಗಳು ಮೈ ಮನ ಮುದುಡಿಸುತ್ತವೆ.

ಮೋಹಿನಿ ಸಂಕಟ–ಸಂಕೋಚಗಳ ಮುದ್ದೆಯಾಗಿ ಬೇಕರಿಯ ಮೆಟ್ಟಲು ಹತ್ತಿದಳು. ಆತ್ಮಿಕ ಹಿಂಸೆಯೋ, ವಾತಾವರಣ ಹಿಂಸೆಯೋ ಅಂತೂ ಯಾವ ಕಾರಣದಿಂದಲೋ ದೇಹದಾದ್ಯಂತ ನಸು ಕಂಪನದ ಅಲೆಹರಿದಾಡಿತು. ಮೋಹಿನಿ ಒಳ ಹೋಗಿ ಹೊರ ವಾತಾವರಣದ ಚಳಿಗೆ ತಡೆ ಹಾಕಿದಳು. ಆದರೇನು? ಮಾನಸಿಕ ಚಳಿ ಕಡಿಮೆಯದೇನೂ ಅಲ್ಲ. ಹೇಗೆ ಕೇಳಲಿ? ನಾನೆಂದೂ ಸಾಲ ಕೇಳಿದವಳಲ್ಲ. ಕೇಳಿದರೆ ಯಾವ ರೀತಿ ತೆಗೆದುಕೊಳ್ಳುತ್ತಾರೋ ಎಂಬ ಭಯ ಬೇರೆ....ಮನದ ತುಂಬೆಲ್ಲಾ ಅದೇ ಚಿಂತೆ. ಎಂದಿನಂತೆಯೇ ದಿನಚರಿಯಲ್ಲಿ ತೊಡಗಿದಳು ಮೋಹಿನಿ. ಯಜಮಾನ ಇನ್ನೂ ಬಂದಿರಲಿಲ್ಲ.

ಸರಬರಾಜುದಾರ ಹುಡುಗ ಹೇಳಿದ "ಯಜಮಾನರು ಮದರಾಸಿಗೆ ಹೋಗಿದ್ದಾರೆ. ನಿಮಗೆ ಬೀಗ ಕೊಡಲು ಹೇಳಿ ಆಫೀಸಿನಲ್ಲಿಟ್ಟಿದ್ದಾರೆ. ನೀವು ಕೃಷ್ಣ ಭಟ್ಟರನ್ನು ಕೇಳಿದರೆ ಕೊಡುತ್ತಾರೆ."

"ಯಾವಾಗ ಬರುತ್ತಾರೆ ಯಜಮಾನರು?"

"ನಾಳೆ ಮಧ್ಯಾಹ್ನ ಬರುತ್ತಾರಂತೆ."

ಮೋಹಿನಿ ಒಂದು ಗಳಿಗೆ ಚಿಂತಾಕ್ರಾಂತಳಾದಳು.

"ನಾಳೆ ಮಧ್ಯಾಹ್ನ ಪ್ಲೇಸಿಗೆ ಬಂದು ಬಿಡುತ್ತಾರೆ. ಹಾಗೆಂದು ಮೊನ್ನೆ ನಿಮ್ಮ ಮುಂದೆಯೇ ಹೇಳಿದರಲ್ಲವೇ ಯಜಮಾನರು?"

ಹುಡುಗನ ಮಾತಿನಿಂದ ತಬ್ಬಿಬ್ಬಾದ ಮೋಹಿನಿ ಏನೋ ಹೇಳಲು ಹೋಗಿ ಇನ್ನೇನೋ ಹೇಳಿದಳು,

"ಹೌದು....... ಹೋದುದು..... ಅಲ್ಲ; ಹೋಗುತ್ತಾರೆಂಬುದು ಗೊತ್ತಿತ್ತು ಅನ್ನಿಸುತ್ತೆ."

"ಮತ್ತೆ ನಿಮಗವರು ನಾಳೆ ಹಿಂದಿರುಗುವ ವಿಚಾರವೂ ತಿಳಿದಿತ್ತೇನೋ...."

"ನಿಜ....ನಿಜ."

"ಮತ್ತೇಕೆ ಕೇಳಿದಿರಿ?"

"ಪಿತ್ತದ ಅಮಲು...."

ಹುಡುಗ ನಕ್ಕು ಬಿಟ್ಟ. ಚಕ್ಕಳಗುಳ್ಳಿ ಇಟ್ಟಷ್ಟು ಮುಸಿ ಮುಸಿ ನಗು.

"ತಲೆ ಕೆಟ್ಟರೆ ಹಾಗೆಯೇ ತಮ್ಮಾ! ಮರೆವು ಜಾಸ್ತಿ."

ಮೋಹಿನಿ ಸ್ವಾಗತಕಾರನಿದ್ದಲ್ಲಿಗೆ ಹೋಗಿ ಬೀಗ ತೆಗೆದುಕೊಂಡು ಎಲ್ಲ ಕೊಠಡಿಗಳ ಮತ್ತು ಉಗ್ರಾಣದ ಮೇಲ್ವಿಚಾರಣೆ ನಡೆಸಿದಳು. ಮಧ್ಯಾಹ್ನ ಒಂದೂವರೆ ಗಂಟೆಯವರೆಗೆ ಬಿಡುವಿಲ್ಲದ ಕೆಲಸ. ನಾನಾ ಚಿಂತೆಗಳಲ್ಲಿ ಹೊತ್ತು ಉರುಳಿದುದು ತಿಳಿಯಲಿಲ್ಲವೇನೋ. ಹುಡುಗ ಜ್ಞಾಪಿಸಿದ "ಅಕ್ಕಾ! ಗಂಟೆ ಒಂದೂವರೆ!"

ಮೋಹಿನಿ ತಕ್ಷಣ ಉಳಿದ ಕೆಲಸ ಮುಗಿಸಿ, ಬೀಗದ ಕೈಯನ್ನು ಆಫೀಸಿಗೆ ಕೊಟ್ಟು ಅಲ್ಲಿಂದ ಹೊರಹೊರಟಳು. ಛಂದೋಲಯಬದ್ಧವಾದ ಪದಗತಿಯಲ್ಲಿ ಹಾದಿ ಕಳೆದುದರ ಪರಿಯೂ ತಿಳಿಯಲಿಲ್ಲ....ಮನೆ ಮುಟ್ಟಿದಾಗಲೇ ಅತ್ತ ಗಮನ. ಮಕ್ಕಳು ಆಗಲೇ ಮನೆಗೈತಂದಿದ್ದಾರೆ. ಒಡಲ ಹಸಿವೆಯ ಆಕರ ಕಣ್ಮನಗಳಲ್ಲಿ ಇಣುಕುತ್ತಿದೆ.

ಇಂದು ಬೇಕರಿಯ ಉಳಿಕೆ ಸಾಕಷ್ಟಿತ್ತು. ನಾಲ್ಕು ತಟ್ಟೆಯಿಟ್ಟು ಊಟ ಬಡಿಸಿದಳು ಮೋಹಿನಿ. ಬೆಳಗಿನ ಅನ್ನಸಾರು ರಾತ್ರಿಗೆ ಮೀಸಲು. ಊಟದ ತಟ್ಟೆಗಳನ್ನು ತೊಳೆದಿಡುತ್ತ ಹೇಳಿದಳು ಸಕ್ಕೂ "ನೀನು ನಮ್ಮ ಮನೆಯಲ್ಲೇ ಬಾಲವಾಡಿ ನಡೆಸಲು ಹೆದರಬೇಕಿಲ್ಲ. ನಮ್ಮ ಜೀವನ ನಾವು ನಡೆಸಿಕೊಳ್ಳುವುದಕ್ಕೆ ಹೆದರಿಕೆ ಏಕೆ? ನಿನ್ನೆ ಶ್ಯಾಂ ಅಂಕಲ್ ಹೇಳಿದ್ದೇನು ಗೊತ್ತೇ? ಒಂದು ವೇಳೆ ಅಪ್ಪ ಸಿಕ್ಕಿದರೂ ಜೇಲಿಗೆ ಕಳುಹಿಸುತ್ತಾರಂತೆ! ಇನ್ನೆಲ್ಲಿಯ ಆಕ್ಷೇಪಣೆ?"

"ಗೋಪು ಬಳಿ ಹಣವಿದೆ. ಬೇಲ್ ಮೇಲೆ ಬಿಡಿಸಿಕೊಳ್ಳಲು ಸಾಧ್ಯ. ದೊಡ್ಡ ಬಾಯಿ ತೆಗೆದು ಕೂಗಾಡುತ್ತ ಕೈಯೆತ್ತಿದರೆ ಕಷ್ಟ. ಅದೇ ಭಯ. ನನಗೆ ಅವಮಾನ ಸಾಕಾಗಿದೆ. ಆದರೂ, ನಾವು ಸಧ್ಯಕ್ಕೆ ಇಲ್ಲೇ ನಡೆಸಲೇಬೇಕು. ಏಕಾಏಕಿ ಹೊರಗಡೆ ಎಂದರೆ ಬಹಳ ಕಷ್ಟ. ಕೈ ತುಂಬ ಹಣ ಬೇಕು. ಸಾಲಸೂಲ ಎಂದರೆ ಹಿಂಸೆ. ನನಗೆ ಗೋಪು ಭಯ ತುಂಬಾ. ಒಮ್ಮೆ ಬಾಲವಾಡಿ ಆರಂಭಿಸಿದ ನಂತರ ಮಧ್ಯೆ ಬಿಡುವುದಕ್ಕಾಗುತ್ತದೆಯೇ? ಅವನು ಒಂದು ವೇಳೆ ಅಮಾನತ್ತಿನಲ್ಲಿಡಲ್ಪಟ್ಟು ಮನೆಯಲ್ಲುಳಿದ ಎಂದರೆ ಬಾಲವಾಡಿ

ಕತೆ ಮುಗಿಸಿ ಬಿಡುತ್ತಾನೆ. ಅದೇ ಕಷ್ಟ. ಈ ಒಂದು ಕಾರಣಕ್ಕಾಗಿ ಭಯ ಇಲ್ಲಿ ಹೇಗಾದರೂ ಇಪ್ಪತ್ತು ಮಕ್ಕಳಿಗೆ ಸ್ಥಳಾವಕಾಶ ದೊರೆಯುತ್ತದೆ. ವಿಶಾಲವಾದ ಸ್ಥಳ ದೊರೆತರೆ ಐವತ್ತು ಅರವತ್ತು ಮಕ್ಕಳನ್ನು ಸೇರಿಸಬಹುದು. ಪರಮಾತ್ಮ ನಮಗೆ ದಾರಿ ತೋರಬೇಕು."

"ಈ ದೇಶದಲ್ಲಿ ಬರಬರುತ್ತ ಎಂತಹ ಗಾಳಿ ಬೀಸುತ್ತಿದೆ? ಸ್ವತಂತ್ರ ಭಾರತದಲ್ಲಿ ಇರಬೇಕಾದ ನ್ಯಾಯನಿಷ್ಠೆ, ಧರ್ಮನಿಷ್ಠೆ ಇಲ್ಲವೇ ಇಲ್ಲ. ಒಗ್ಗಟ್ಟು ಕೂಡ ಅಷ್ಟಕಷ್ಟೆ. ಇದು ಸ್ವಾತಂತ್ರ್ಯದ ಪರಿಣಾಮವೋ ಅಥವಾ...."

ಮೋಹಿನಿ ನಡುವೆ ಬಾಯಿ ಹಾಕಿದಳು "ನವಭಾರತದಲ್ಲಿ ನ್ಯಾಯ ನಿಷ್ಠೆಗಿಂತ ನ್ಯಾಯ ನಷ್ಟವೇ ಹೆಚ್ಚು. ಇಂದು ಸತ್ಯ-ಧರ್ಮ-ನ್ಯಾಯ-ನೀತಿ-ಸಹನೆ-ಶಾಂತಿಗಳು ಎಲ್ಲಡಗಿವೆಯೋ ದೇವರಿಗೇ ಗೊತ್ತು. 'ಭಾರತ ಸಂಸ್ಕೃತಿ' ಎಂದು ಹೆಮ್ಮೆಪಡುತ್ತಿದ್ದ ನಾವು ಇಂದು ಕೊಲೆ-ಸುಲಿಗೆ-ಹಿಂಸಾಚಾರಗಳಿಂದ ತಲೆತಗ್ಗಿಸುವಂತಾಗಿದೆ. ಜೇಲುಶಿಕ್ಷೆಎಂದರೆ ಭಯವೇ ಇಲ್ಲ. ಹಿಂಸೆ. ಹಿಂಸೆ. ಹಿಂಸೆ. ಎಲ್ಲಿಂದ ಎಲ್ಲಿಯವರೆಗೂ ನಾವು ಕಾಣುತ್ತಿರುವುದು ಹಿಂಸೆಯನ್ನೆ ಹಿಂಸಾಚಾರ ರಕ್ತಗತವಾಗಿ ಬಿಟ್ಟಿದೆ. ಭಾರತ ಸಂಸ್ಕೃತಿ ಇಷ್ಟೊಂದು ಹದಗೆಡುತ್ತದೆಂದು ನಾನು ಭಾವಿಸಿರಲಿಲ್ಲ."

"ಹೌದಮ್ಮಾ, ಇದು ವಿಸ್ಮಯ ಮಾತ್ರವಲ್ಲ, ವ್ಯಸನಕ್ಕೂ ಕಾರಣವಾಗಿದೆ. ದೀನ ದಲಿತರಿಗೆ ಸರಿಯಾದ ರಕ್ಷಣೆಯಿಲ್ಲ. ಬೌದ್ಧಿಕಶಕ್ತಿಯನ್ನು ಗುರುತಿಸುವವರಿಲ್ಲ. ಸ್ವಾರ್ಥವೇ ಪರಮಾರ್ಥವಾದ ಕುಲಬಾಂಧವರಲ್ಲಿ ಇತರರಿಗೆ ಅವಕಾಶ ಲಭಿಸುವುದಾದರೂ ಹೇಗೆ? ನಾವೇ ನಮ್ಮ ಶಕ್ತಿ ಸಾಮರ್ಥ್ಯಗಳನ್ನು ಉಪಯೋಗಿಸಿ ಕೊಳ್ಳಬೇಕೇ ಹೊರತು ಹಿಂದುಳಿದರೆ ಮುಳುಗಡೆಯೇ ಗತಿ."

"ನಿಜ ಮಗಳೆ! ನಿನಗಾಗಲೇ ಸಾಕಷ್ಟು ಅನುಭವವಾಗಿದೆ...." ಶುಷ್ಕ ನಗೆ ಬೀರಿದಳು ಮೋಹಿನಿ.

"ಈ ಸಲ ನೋಡಿದರೆ ಹೋದ ಸಲಿಯ ಹಾಡೇ ಶಾಲೆಯಲ್ಲಿ. ವಸುಮತಿ ನಾಟ್ಯ ಪ್ರವೀಣೆ ಹೌದು. ನಾಟಕನಟನಾ ಕೌಶಲ್ಯ ಏನೇನೂ ಇಲ್ಲ. ಅವಳ ಶ್ರೀಮಂತಿಕೆ ಇಲ್ಲದ್ದನ್ನೂ ಆಗಮಾಡಿಸುತ್ತಿದೆ. ಶಾಲೆಯಲ್ಲಿ ಪ್ರಾಕ್ಟೀಸ್ ಮಾಡುತ್ತಿದ್ದಾಳೆ. ಇದುವರೆಗೂ ನಟನ ಕೌಶಲ ಕರಗೂಡಲಿಲ್ಲ. ಟೀಚರ್ ಕೂಡ ಅವಳ ಕಡೆಗೇ. ನನಗೆ ನಟನ ಕೌಶಲವಿದ್ದರೂ ಎಲ್ಲರ ಒಲವು ಅವಳ ಕಡೆಗೇ. ಅವಳಿಗೆ ಹೇಗೂ ನಾಟ್ಯರಂಗದಲ್ಲಿ ಪಾತ್ರ ಇದ್ದೇ ಇದೆ. ಇನ್ನೊಬ್ಬರಿಗೆ ಒಂದು ಅವಕಾಶ ಕೊಡೋಣ ಎಂಬ ವಿಶಾಲ ಮನೋಭಾವ ಇಲ್ಲವೇ ಇಲ್ಲ.

ನೋಡಬೇಕು, ಏನಾಗುತ್ತೆ ಅಂತ."

"ನಾವು ಜೀವನ ಕ್ಷೇತ್ರದಲ್ಲಿ ಹೋರಾಡಿ ಗೆಲ್ಲಬಲ್ಲೆವಾದರೆ ಮುನ್ನಡೆಯ ಬಲ್ಲೆವು. ಇಲ್ಲವಾದರೆ ನೀನೆಂದಂತೆ ಮುಳುಗಡೆಯೇ ಕಾದಿಟ್ಟ ಬುತ್ತಿ."

ಶಾಲೆಗೆ ಪುನಃ ಹೊರಡುವ ಹೊತ್ತಾಯಿತು.

ಸಕ್ಕೂ ತಂಗಿಯರೊಡನೆ ಶಾಲೆಗೆ ಹೊರಡುತ್ತ "ಅಮ್ಮಾ ಸುಮನಾ ಆಂಟಿ ಬಂದರೆ ಮೊದಲು ಇಲ್ಲಿಯೇ ಬಾಲವಾಡಿ ತೆರೆಯೋಣ ಎಂದು ಹೇಳು. ಅವರ ಅಭಿಪ್ರಾಯವನ್ನೂ ತಿಳಿದಂತಾಯಿತು. ಕಮಲಾ ಆಂಟಿಗೂ ಹೇಳು."

ಹೇಳು ಹೇಳುತ್ತಲೇ ಹೊರಟು ಹೋದಳು ಸಕ್ಕೂ. ಎಡಬಲಗಳಲ್ಲಿ ನೀನಾ–ಮೀನಾರ ನಡೆ. ಮುಂಬಾಗಿಲು. ಮುಚ್ಚಿ ಒಳ ಬಂದು ಕುಳಿತು ಕೊಳ್ಳುವುದರೊಳಗಾಗಿ ತಲೆ ಬಾಗಿಲ ಕರೆಗಂಟೆ ಕರೆ ನೀಡಿತು. ಕುಕ್ಕೂ, ಕುಕ್ಕೂ, ಕುಕ್ಕೂ, ಕುಕ್ಕೂ ಮೋಹಿನಿ ಎದ್ದು ಹೋಗಿ ಕದ ತೆರೆದಳು. ಕರೆ ನೀಡಿದವಳು ಚಂದ್ರಿ.

"ಊಟ ಆಯಿತೇ ಮೋಹಿನಿ?"

"ಆಯಿತು. ಈಗಷ್ಟೇ ಮುಗಿಸಿದೆ."

"ಗೋಪು ಹುಡುಕಿಕೊಂಡು ಬೊಂಬಾಯಿಗೆ ಹೋದ ಪೋಲೀಸರು ಇನ್ನೂ ಹಿಂದಿರುಗಲಿಲ್ಲ. ಗೋಪು ಅಲ್ಲಿಯೇ ಇದ್ದು ಅಡಗಿಕೊಂಡಿದ್ದಾನಂತೆ. ಅದರಿಂದಾಗಿ ಅಲ್ಲಿಯೇ ಕಾವಲಿಟ್ಟಿದ್ದಾರೆ."

"ಅಲ್ಲಿರುವ ಸುಳಿವು ಸಿಕ್ಕಿದೆಯೇ?"

"ಹೌದಂತೆ. ಈಸಲಿ ಅವನನ್ನು ತಪಾಸಣೆ ಮಾಡದೆ ಬಿಡುವುದಿಲ್ಲ."

ಮೋಹಿನಿ ಯೋಚನಾಕ್ರಾಂತಳಾದಳು. ಪ್ರತಿ ಹೇಳಲಿಲ್ಲ. ಹೃದಯ ರಂಗದಲ್ಲಿ ರುದ್ರಲಾಸ್ಯವಾಡುವ ಭಾವತರಂಗಿಣಿ ಕೂಗಿ ಹೇಳಿತು, "ಅವನಿಂದ ದೇಶೋದ್ಧಾರವಾಗಲೀ ಈ ಜೀವನೋದ್ಧಾರವಾಗಲೀ ಖಂಡಿತ ಆಗುವುದಿಲ್ಲ."

ಹಾ....! ಅಕ್ಷರಶಃ ಸತ್ಯ. ಅವನಿಂದ ಯಾವೊಂದು ಸತ್ಕಾರ್ಯವೂ ಆಗುವುದಿಲ್ಲ.

ಮೈಮರವಟ್ಟಂತೆ ಸುಮ್ಮನಿದ್ದ ಮೋಹಿನಿಯನ್ನು ಕುರಿತು "ಏಕೆ ಮೋಹಿನಿ! ಏನೋ ಒಂದು ರೀತಿ ಗಂಭೀರವಾಗಿಬಿಟ್ಟೆ? ಮನಸ್ಸಿಗೆ ತುಂಬ ನೋವಾಯಿತೇ?"

"ನಾನು ಅವನಿಗಾಗಿ ಮರುಗುವುದೇ ಇಲ್ಲ. ನನಗಾಗಿ–ನನ್ನ ಮಾನಕ್ಕಾಗಿ ಮಾತ್ರ....ತಡೆಯಲಾರದ ಸಂಕಟ."

"ಇದು ಆಗಲೇ ಮುಗಿದ ಅಧ್ಯಾಯ. ಮುಂದಿನ ಪುಟಗಳನ್ನು ತೆರೆಯುತ್ತ

ಹೋದರೆ ಜೀವನ ಗತಿಗೊಂದು ಮಹತ್ತರ ತಿರುವು ಸಿಕ್ಕೀತು. ನೀನು ಹಿಂತಿರುಗಿ ನೋಡಲೇಬಾರದು."

"ದಿಟ. ನಾನು ಯೋಚಿಸುವುದು ಅದನ್ನೆ. ಈ ದೇಶದ ಯುವತಿಯರು ಬಿ.ಎ. ಪಾಸುಮಾಡಿ ಬರೀ ಗೃಹಿಣೀತ್ವದ ಯಂತ್ರವಾಗಿದ್ದಾರೆ. ಸ್ಥಿತಿಗತಿಯ ಮಾರ್ಪಾಡಿಗೆ ಚಿಂತಿಸುವುದಿಲ್ಲ ಕೂಡ. ನಮ್ಮ ನಮ್ಮ ಉಳಿತಾಯದ ಸಮಯ ವನ್ನು ದೇಶೋದ್ಧಾರ ಕಾರ್ಯಕ್ಕಾಗಿ ಬಳಸಬಾರದೇಕೆ ಎಂಬುದು ನನ್ನ ಮುಂದಿನ ಪ್ರಶ್ನೆ."

"ನಮ್ಮವರು ಬಿಡಬೇಕಲ್ಲ? ಸ್ತ್ರೀಪುರುಷರ ಸಾಮೂಹಿಕ ಕೃಷಿಯಿಂದ ಪಾತಿವ್ರತ್ಯಕ್ಕೆ ಕುಂದು; ವರ್ಣಸಂಕರಕ್ಕೆ ದಾರಿ, ಎಂಬ ಕುಕಲ್ಪನೆ ಬಹುತೇಕ ಮಂದಿಯಲ್ಲಿ ತುಂಬಿಹೋಗಿದೆ ಅಂತಲೇ ಮನೆಮನೆಗಳೂ ಕದಮುಚ್ಚಿಕೊಳ್ಳುತ್ತದೆ. ಪರಿಣಾಮ ಸ್ತ್ರೀತ್ವಕ್ಕೆ ಸಂಕೋಲೆ."

"ನನ್ನ ನರನರಗಳೂ ದುಃಖಿಸುತ್ತಿರುವುದು ಇದಕ್ಕಾಗಿಯೇ. ಹಿಂದೂಸ್ಥಾನ ಅಷ್ಟು ಸುಲಭವಾಗಿ ಈ ಸಂಕೋಲೆಯನ್ನು ಕಳಚಲು ಸಿದ್ಧವಾಗಿಲ್ಲ. ಅದು ಖಂಡಿತ."

ಇಬ್ಬರ ಮುಖದಲ್ಲೂ ತಿರಸ್ಕಾರದ ನಗೆ ಮೂಡಿ ಮಾಯವಾಯಿತು.

ಚಂದ್ರಿ ಹೊರಟಾಗ ಗಡಿಯಾರದ ಮುಳ್ಳು ಮೂರರ ಸಂಖ್ಯೆಯನ್ನು ಸಮೀಪಿಸಿತ್ತು.

ಅವಳು ಹೋದನಂತರ ಮುಂಬಾಗಿಲನ್ನು ಮುಚ್ಚಿಕೊಂಡು ಕಿಟಕಿಯ ಬಳಿ ನಿಂತಳು. ಹೊರ ಜಗತ್ತಿನಲ್ಲಿ ರಣರಣಿಸುವ ಸುಡು ಬಿಸಿಲು, ದೂರ ದಿಗಂತದ ವರೆಗೂ ಉಂಗುರುಂಗುರವಾಗಿ ರಿಂಗಣಿಸುವ ಮೃಗಜಲದ ಪ್ರಭಾವ.

ಕಿಟಕಿಯ ಮೇಲೆ ಎರಡೂ ಮೊಣಕೈಗಳನ್ನು ಊರಿ ಹೊರಜಗತ್ತಿನಲ್ಲಿ ಕಣ್ಮನಗಳನ್ನು ನೆಟ್ಟಳು. ಸುಡು ಬಿಸಿಲ ಝಳದಿಂದ ಗಿಡಮರಗಳನ್ನು ಆಶ್ರಯಿಸಿ ಪಕ್ಷಿಗಳು ಮೆಲು ಮೆಲ್ಲನೆ ಕೊರಳ ದನಿಯನ್ನು ಹರಿಯ ಬಿಡುತ್ತಿವೆ. ಬೇಲಿಸಾಲಿನಲ್ಲಿ ಉದ್ದಕ್ಕೂ ಗುಬ್ಬಚ್ಚಿ ಮತ್ತು ಚಿಟ್ಟಕ್ಕಿಗಳ ಕೀಚಲು ದನಿಯ ಚೀಂಕಾರ. ಅವು ರೆಕ್ಕೆ ಪುಕ್ಕ ಆಡಿಸುತ್ತ ರೆಂಬೆಯಿಂದ ರೆಂಬೆಗೆ ಜಿಗಿದು ಚಿಚಿರಿ ದನಿಗೈಯುತ್ತಿದ್ದರೆ ಕಣ್ಣಿನಗಳಿಗೆ ಆನಂದವೇ ಆನಂದ.

ಆ ಪಕ್ಷಿ ಸಮಾಜವನ್ನು ನೋಡುತ್ತ ನಿಂತಳು ಮೋಹಿನಿ.

ಎಲ್ಲಿಂದ ಎಲ್ಲಿಯವರೆಗೂ ಮನೆಮನೆಯ ಬಾಗಿಲುಗಳು ಮುಚ್ಚಿಕೊಂಡಿವೆ. ಜನ ವಿಶ್ರಾಂತಿಯಲ್ಲಿದ್ದಾರೆ. ರಸ್ತೆಯಲ್ಲಿ ವಾಹನಗಳೂ ವಿರಳ.

ಈ ಜಗತ್ತು ಎಷ್ಟು ದಿವ್ಯ! ಎಂತಹ ಸುಂದರ!

ಬ್ರಹ್ಮನಿಗೆ ಜಗತ್ತನ್ನು ಸೃಷ್ಟಿಸಿದ ನಂತರ ನರಜಂತುಗಳನ್ನು ಸೃಷ್ಟಿಸಲು ಉತ್ತಮ ಸಾಮಗ್ರಿ ಉಳಿಯದೆ ಯಾವ ಕನಿಷ್ಠ ಪದಾರ್ಥದಿಂದ ಸೃಷ್ಟಿಸಿದನೋ ಏನೋ....ಅದಕ್ಕೇ ಇಂತಹ ಕುಜನರ ವಾರ್ಧಿಯು ಸೃಷ್ಟಿಯಾಯಿತು. ಕುಮತಿ-ಕುವಿಚಾರಗಳು ರಂಗುರಂಗಾಗಿ ಮರೆಯಲು ಕಾರಣ....

"ಮನುಷ್ಯರನ್ನು ಕಃಪದಾರ್ಥದಿಂದ ಖಂಡಿತ ಸೃಷ್ಟಿಸಲಿಲ್ಲ ಪರಬ್ರಹ್ಮ" ಎಂದಿತು ಮನಸ್ಸು.

"ಲೋಕಪ್ರಜ್ಞೆ, ಧರ್ಮಪ್ರಜ್ಞೆ, ನ್ಯಾಯನೀತಿಪ್ರಜ್ಞೆ ಇರುವ ಮನುಷ್ಯವರ್ಗ ಏಕೆ ಇಷ್ಟು ಹೀನಸ್ಥಿತಿಯಲ್ಲಿದೆ?"

"ಅಂದರೆ....?"

"ಧರ್ಮಭ್ರಷ್ಠತೆ-ಆಚಾರಹೀನತೆ...."

"ಭಾರತೀಯರನ್ನೇ ಕುರಿತು ಹೇಳುವುದಾದರೆ ವೇದ ಸಂಸ್ಕೃತಿಯ ಹಿರಿಮೆ ಗಿಂತಲೂ ಬಡತನದ ಹಿರಿಮೆಯೇ ಹೆಚ್ಚಿನದು. ಬಡತನವನ್ನು ಒಂದೇ ಬಾರಿಗೆ ಆರುಗಾಗಿಸುವ ಅತೀ ಕಾಮುಕತೆಯ ಪ್ರಸಂಗವೇ ದುರ್ನೀತಿಗೆ ಕಾರಣ...."

"ಬಡತನ-ದುರ್ನೀತಿ ಒಂದೇ ನಾಣ್ಯದ ಎರಡು ಮುಖ ಎನ್ನುವದನ್ನು ಒಪ್ಪಲಾರೆ."

"ತೊರೆಯಾಗಿ ಹರಿದುದು ನದಿಯಾಗುತ್ತದೆ ಅಷ್ಟೆ."

"ನನಗಿದು ಅರ್ಥೈಸಲಾಗದ ಒಗಟು."

"ಅರ್ಥಾತುರಾಣಾಂ ನ ಗುರುರ್ನಬಂಧುಃ ಕಾಮಾತುರಾಣಾಂ ನ ಭಯಂ ನ ಲಜ್ಜಾ!"

"ಇದಕ್ಕೆ ಕೊನೆಯೇ ಇಲ್ಲವೇ ?"

"ಮನೋವಿಕಾಸವಾದಾಗ."

"ಅಲ್ಲಿಯ ತನಕ ನಮ್ಮಂತಹವರ ಗತಿಯೇನು ?"

"ಅರಕ್ಷಿತಂ ತಿಷ್ಠತಿ ದೈವರಕ್ಷಿತಂ"

೧೫

ಕೃಷ್ಣ ಪಕ್ಷದ ಕಗ್ಗತ್ತಲು. ರಸ್ತೆ ಬದಿಯ ಗಿಡ ಮರಗಳ ಆಕಾರವೂ ಕಾಣಿಸುತ್ತಿಲ್ಲ.

ತಂಗಾಳಿ ತೀಡುತ್ತ ಸುಯ್ದು ಬರುವ ಮೆಲು ಸದ್ದು. ಗೂಗೆಗಳ ಗೂ......ಗೂ ಗೂಂಕೃತಿ. ಎಲ್ಲೋ ಒಮ್ಮೊಮ್ಮೆ ಮಂಗಗಳ ಕಿರುಚಾಟ. ಮತ್ತಾವ ಸದ್ದೂ ಇಲ್ಲ.

ಎಲ್ಲಿಂದಲೋ ದಂಡ್ಯೆಸಿ ಬಂದಿತು ಮಿಂಚು ಹುಳುಗಳ ದಂಡು. ದೀಪ ದಾರಿಗಳಂತೆ ಅವು ಅಲ್ಲಲ್ಲೇ ಹಾರಾಡುವರೀತಿ ಮನಮೋಹಕ. ಮಿನುಮಿನುಗುವ ಮಿಂಚುಕೂಟ. ಕ್ಷಣವೂ ತಂಗದೆ ಹಾರಾಡುವ ಹೊನ್ನಿನ ಹುಳುಗಳದಂಡು. ಅವು ರಾತ್ರಿಯನ್ನು ಶೃಂಗರಿಸಲು ಬಂದ ಪರಿಯಲ್ಲಿ ಶೃಂಗಾರಮಯವಾಗಿ ಕಂಡು ಬರುತ್ತಿವೆ. ಯಾವುದೋ ಇರುಳುಗಣ್ಣಿನ ಪಕ್ಷಿ ಹೊನ್ನಿನ ಹುಳುಗಳನ್ನು ಕಂಡದ್ದೇ ತಡ ಹಿಡಿದು ನುಂಗಲು ಧಾವಿಸಿ ಬಂತು. ಮಿಂಚಿನ ಬೆಳಕಿನಲ್ಲಿ ಕಪ್ಪು ಪಕ್ಷಿಯ ಹಾರಾಟವೂ ಸ್ಪಷ್ಟ. ಮಿಂಚು ಹುಳುಗಳ ಮಿಂಚಿನ ಓಟವೂ ಸ್ಪಷ್ಟ.

ಗೋಪು ಟೋಲ್ ಗೇಟ್‌ಗಿಂತಲೂ ಹತ್ತು ಮಾರು ಹಿಂದೆಯೇ ಜೊತೆಗಾರ ಪೋಲೀಸ್ ನಾಣಿಯೊಂದಿಗೆ ನಿಂತಿದ್ದ. ಲಾರಿಯೊಂದರಲ್ಲಿ ಕಳ್ಳ ಸಾಗಾಣಿಕೆ ನಡೆದಿದೆ ಎಂಬ ಗುಮಾನಿಯ ಮೇಲೆ ಅವನ ಕಾವಲು. ಅವನು ಅಲ್ಲಿಗೆ ಬರುವಾಗ ಕದ್ದ ಹಣವನ್ನು ಒಂದಿಗೇ ತಂದಿದ್ದ. ಅವರಿಬ್ಬರೂ ಬಂದುದು ಮೋಟಾರ್ ಬೈಕ್ ಮೇಲೆ. ನಾಣಿಗೆ ಹಣದ ಸುದ್ದಿಯನ್ನು ಮುಟ್ಟಿಸಿ "ನಾವು ಹೇಗಾದರೂ ಹಣದೊಂದಿಗೆ ಪಾರಾಗಬೇಕು, ಏನು ಮಾಡೋಣ?" ಎಂದ.

ನಾಣಿ ಸ್ವಲ್ಪಹೊತ್ತು ಯೋಚಿಸಿ ನುಡಿದ "ನಾವು ಬೈಕ್‌ನ ನಂಬರ್ ಪ್ಲೇಟ್ ತೆಗೆದು ಇವರಲ್ಲೇ ಬೊಂಬಾಯಿಗೆ ಹೋದರೆ ?"

"ಛೇ! ಛೇ! ಸಾಧ್ಯವಿಲ್ಲ !" ಗೋಪು ತಲೆಯಾಡಿಸುತ್ತ ಹೇಳಿದ, ಇದು ಬಹಳ ಕಷ್ಟದ ಮಾತು. ನಂಬರ್ ಪ್ಲೇಟ್ ತೆಗೆದರೂ ವಾಹನದ ಗುರುತು ಕ್ಷಣದಲ್ಲಿ ಹತ್ತುತ್ತೆ. ಆದ್ದರಿಂದ ನಾವು ಲಾರಿಯವರನ್ನು ಒಲಿಸಿಕೊಂಡು ಅವರ ಮೂಲಕ ಪಯಣಿಸುವುದು ಒಳ್ಳೆಯದು. ಆದರೆ, ಲಾರಿಯವರನ್ನು ನಂಬುವುದು ಹೇಗೆ?"

"ಹೇಗಾದರೂ ನಮ್ಮ ದಾರಿಗೆ ಎಳೆದುಕೊಳ್ಳಬೇಕು."

"ಎಷ್ಟಿದೆ ಹಣ?"

"ಎಣಿಸಲು ಅವಕಾಶವೇ ಆಗಲಿಲ್ಲ. ಹಾಗೆಯೇ ಎಲ್ಲಾ ಕಟ್ಟಗಳನ್ನೂ ತುಂಬಿಕೊಂಡಿರುವೆ ಅಷ್ಟೆ. ಎಪ್ಪತ್ತು ಎಂಭತ್ತು ಸಾವಿರ ಇರಬಹುದು, ಅಥವಾ ಅದಕ್ಕೂ ಹೆಚ್ಚು!"

"ನೀನು ಮಾಡಿದ್ದು ತಪ್ಪು. ಹಣಕ್ಕಾಗಿ ತಲೆಕೊಡಬೇಕಾಗಿ ಬಂದರೆ....?"

"ತುಂಬ ಚಾಣಾಕ್ಷತೆ ಬೇಕು. ಹಿಂದೊಮ್ಮೆ ಇಂತಹ ಪ್ರಸಂಗದಲ್ಲಿ ಎಲ್ಲರ ಕಣ್ಣಿಗೂ ಮಣ್ಣೆರಚಿರುವೆ. ಹುಷ್! ಇದು ನಿನ್ನಲ್ಲೇ ಇರಲಿ, ಯಾರಿಗೂ ಹೇಳಬೇಡ. ನಿನಗೂ ಇದರಲ್ಲಿ ಪಾಲುಂಟು. ಲಾರಿ ಸಿಕ್ಕಿದರೆ ನಾನು ಅದರಲ್ಲಿ ಹೋಗಿ ಬಿಡುವೆ. ನೀನು ಬೈಕ್ ತೆಗೆದುಕೊಂಡು ಹೋಗು."

"ನನಗೆ ಹಣದಲ್ಲಿ ಪಾಲು?"

"ಕೊಡುವೆ....ನೀನು ಬೊಂಬಾಯಿಗೆ ಬಂದಾಗ ನನ್ನನ್ನು ಕಾಣು ಈಗ ಒಂದು ನೋಟಿನ ಕಟ್ಟು ತೆಗೆದುಕೊ...."

ದೂರದಲ್ಲಿ ಲಾರಿ ಬರುತ್ತಿರುವ ಸದ್ದು ಮತ್ತು ಲೈಟಿನ ಪ್ರಕಾಶಮಾನವಾದ ಬೆಳಕು....ಗೋಪು ಪಕ್ಕನೆ ಅವನ ಕೈಗೆ ಒಂದು ನೋಟಿನ ಕಟ್ಟನ್ನು ತೆಗೆದುಕೊಟ್ಟು ಸೂಟ್‌ಕೇಸ್ ಮುಚ್ಚಳ ಭದ್ರಪಡಿಸಿದ. ಲಾರಿ ದೊಡ್ಡ ಸದ್ದುಮಾಡುತ್ತ ಬರುತ್ತಿದೆ. ಭಾರವನ್ನು ಹೊರಲಾರದೆ ಹೊತ್ತು ಎಳೆಯುವಂತೆ ಒಯ್ಯೋ ಎಂದು ಚೀರುವ ಗಂಭೀರಸದ್ದು!

ತಕ್ಷಣ ಇಬ್ಬರೂ ಬೈಕನ್ನು ರಸ್ತೆಗೆ ಅಡ್ಡಯಿಟ್ಟು ದೊಣ್ಣೆ ಚಾಚಿ ಗಾಡಿಯನ್ನು ನಿಲ್ಲಿಸಲು ಅಪ್ಪಣೆ ಮಾಡಿದರು. ಲಾರಿ ನಿಂತಿತು. ಅದರಲ್ಲಿ ಡ್ರೈವರ್ ಮಾತ್ರವಲ್ಲದೆ ಯಜಮಾನನೂ ಇದ್ದ. ಅವನು ಲಾರಿಯಿಂದ ಇಳಿದು "ಏನು ಸ್ವಾಮಿ? ಏತಕ್ಕೋಸ್ಕರ ನಿಲ್ಲಿಸಿದ್ದು?" ಎಂದ.

"ಲಾರಿಯಲ್ಲಿ ಏನೇನಿದೆ?"

"ಈರುಳ್ಳಿ-ಆಲೂಗೆಡ್ಡೆ ಮೂಟೆಗಳು......ಟೋಲ್‌ಗೇಟ್ ಇನ್ನೂ ಮುಂದೆ ಇದೆ. ನೀವು ಇಲ್ಲಿ ನಿಲ್ಲಿಸಲು ಕಾರಣವೇನು?"

"ನಾವು ನಿಮ್ಮೊಂದಿಗೆ ಟೋಲ್‌ಗೇಟ್‌ಗೆ ಬರುತ್ತೇವೆ."

"ಇಲ್ಲೊಮ್ಮೆ ಅಲ್ಲೊಮ್ಮೆ ಎಂದರೆ ನಮ್ಮ ಸಮಯ ಹಾಳು. ನಾವು ದೂರ ಪ್ರಯಾಣ ಮಾಡುವವರು."

"ಸಧ್ಯ ನಿಮ್ಮಲ್ಲಿ ಕಳ್ಳಮಾಲೇನಿದೆ ಇಲ್ಲೇ ತಿಳಿಸಿ ಬಿಡಿ."

ಯಜಮಾನ ತಡಬಡಿಸಿದ. ಏನೋ ಹೇಳಬೇಕು, ಹೇಳಲಾರ. ಗಂಟ

ಲಾರಿತು. ತುಟಿಯನ್ನು ನಾಲಿಗೆಯನ್ನು ಮತ್ತೆಮತ್ತೆ ಒರಿಸಿಕೊಂಡ. ಆ ಸರಿ ರಾತ್ರಿಯಲ್ಲೂ ಮೈ ಬೆವರತೊಡಗಿತು.

"ಏನಿದೆ ಹೇಳ್ರೀ? ಏಕೆ ಸುಮ್ಮನೆ ಇದ್ದೀರಾ?" ನಾಣಿ ಜಬರಿಸಿದ.

"ಈರುಳ್ಳಿ....ಆಲೂಗೆಡ್ಡೆ...."

"ಏನ್ರೀ, ಹೇಳಿದ್ದೇ ಹೇಳುತಿದ್ದೀರಿ!"

"ನಿಜ ಹೇಳುತ್ತಿರುವೆ ಈರುಳ್ಳಿ...."

"ಶ್ಯ್! ಮತ್ತು ಅದೇ! ಈಗ ನಾವೇ ಮೂಟೆ ಎಲ್ಲಾ ಚೆಲ್ಲಾಡುತ್ತೇವೆ!" ಪೀಪಿ ಕೈಗೆ ತೆಗೆದುಕೊಂಡು ಪುನಃ "ಏನು ಹೇಳುತ್ತೀರಿ ?"

"ಕೆಳಗಡೆ ಒಂದು ಮೂಟೆ ಗಾಂಜಾ ಇದೆ!"

"ಎಷ್ಟು ಮೂಟೆ ಹೇಳಿ?"

"ಒಂದೇ ಒಂದು! ಅದೂ ಬಹಳ ಸಣ್ಣ ಮೂಟೆ!"

"ಖಂಡಿತ....?"

"ದೇವರಾಣೆಗೂ ಖಂಡಿತ. ಒಂದು ಸಣ್ಣ ಮೂಟೆ ಗಾಂಜಾ ಇದೆ."

"ಒಂದೇ? ಹತ್ತೇ?"

"ಇಲ್ಲ, ಇಲ್ಲವೇ ಇಲ್ಲ, ಒಂದೇ ಒಂದು. ದಯವಿಟ್ಟು ಕ್ಷಮಿಸಿ. ಒಂದು ಮೂಟೆಯನ್ನು ಹೇಗಾದರೂ ಪಾರಾಗಲಿಕ್ಕೆ ಬಿಡಿ. ಕೈ ಮುಗಿದು ಕೇಳಿಕೊಳ್ಳುವೆ. ಪೋಲೀಸ್ ಸ್ಟೇಷನ್ನಿಗೆ ಸುದ್ದಿ ತಲುಪಿದರೆ ನಮ್ಮ ಸರ್ವಸ್ವವೂ ಸೂರೆಯಾಗಿ ಬಿಡುತ್ತದೆ. ಪೋಲೀಸರು ನಮ್ಮನ್ನು ಸುಲಿಗೆ ಮಾಡಿಬಿಡುತ್ತಾರೆ. ಸರಕಾರ ನಮ್ಮನ್ನು ಮಟ್ಟ ಹಾಕಿಬಿಡುತ್ತದೆ. ದಯವಿಟ್ಟು ನಮ್ಮನ್ನು ಈ ಗಂಡಾಂತರದಿಂದ ಪಾರು ಮಾಡಿ!"

"ಈಗ....ಈಗ ನಾವು ನೀವೂ ಒಂದು ಒಪ್ಪಂದಕ್ಕೆ ಬರೋಣ."

"ಏನು ಹೇಳಿ....?"

"ನಮ್ಮಲ್ಲಿ ಒಬ್ಬರು ನಿಮ್ಮೊಂದಿಗೆ ಬರುತ್ತೇವೆ. ಲಾರಿ ನಿಲ್ಲಿಸಿದಾಗ ನಿಮ್ಮ ಮೂಟೆಗಳನ್ನು ಪರಿಶೀಲಿಸುವ ಉದ್ದೇಶದಿಂದ."

"ಬೇಡ ಸ್ವಾಮೀ....ಬೇಡ! ಈಗಲೇ ಏನಾದರೂ ಒಪ್ಪಂದ ಮಾಡಿಕೊಳ್ಳೋಣ."

"ಅದೆಲ್ಲಾ ಆಗುವುದಿಲ್ಲ."

"ಇಲ್ಲೇ ಹೊತ್ತು ಅನ್ಯಾಯವಾಗಿ ಕಳೆದು ಹೋಗುತ್ತಿದೆ. ದಯಮಾಡಿ...."

"ಏನು ಹೇಳಿ? ಪೋಲೀಸ್ ವ್ಯಾನ್ ಕೂಡ ಈ ದಾರಿಯಲ್ಲಿ ಬರಲಿದೆ."

"ನಿಮ್ಮಲ್ಲಿ ಒಬ್ಬರನ್ನು ಕರೆದೊಯ್ಯುವುದಕ್ಕೆ ಅಡ್ಡಿಯಿಲ್ಲ. ನಮ್ಮ ವಸ್ತುವೇನೆಂಬ ಗುಟ್ಟು ನಿಮ್ಮಲ್ಲೇ ಇರಲಿ. ಯಾರಿಗೂ ಹೇಳಕೂಡದು." ಪ್ರತ್ಯಂತ ದೀನಾತಿದೀನತೆ ಯಿಂದ ಕೇಳಿಕೊಂಡ ಯಜಮಾನ.

"ಹಾಗಾದರೆ ನಮಗೇನು ಕೊಡುತ್ತೀರಿ?"

"ಇಬ್ಬರಿಗೂ ಐನೂರು-ಐನೂರು ರೂಪಾಯಿ ಕೊಡುವೆ. ನಮ್ಮನ್ನು ಸುಖವಾಗಿ ಟೋಲ್‌ಗೇಟನ್ನು ದಾಟಿಸಿ ಬಿಡಿಸ್ವಾಮಿ!"

"ಆಗಲಿ, ಈಗಲೇ ಹಣ ಇಟ್ಟು ಬಿಡಿ!"

ಲಾರಿ ಮಾಲಿಕ ಲೈಟಿನ ಬೆಳಕಿನಲ್ಲಿ, ಇಬ್ಬರಿಗೂ ಹಣವನ್ನು ಎಣಿಸಿ ಕೊಟ್ಟ. ಗೋಪು ತನ್ನ ಸೂಟ್‌ಕೇಸಿನೊಂದಿಗೆ ಲಾರಿ ಹತ್ತಿದ ನಾಣಿ ಹಿಂದಕ್ಕೆ ಬೈಕ್ ತಿರುಗಿಸಿದ.

ಲಾರಿ ಒಯ್ಯೋ ಎಂದು ರಕ್ಕಸದನಿಯಲ್ಲಿ ಒರಲುತ್ತ ಓಡತೊಡಗಿತು. ಕತ್ತಲೆಯ ತೆರೆಯನ್ನು ಹರಿದು, ಬೀಸುಗಾಳಿಯನ್ನು ಭೇದಿಸಿ ಮುಂದುವರಿಯುತಿತ್ತು ಬಸ್ಸು. ಟೋಲ್‌ಗೇಟ್ ಸಮೀಪಿಸುತ್ತಲೂ ಗೋಪು ಹೇಳಿದ "ನೀವು ಲಾರಿ ನಿಲ್ಲಿಸಿ ನಾನು ಟೋಲ್‌ಗೇಟ್ ಆಫೀಸಿನಲ್ಲಿ ಮಾತಾಡಿ ಬರುವೆ."

ಲಾರಿ ನಿಂತಿತು.

ಗೋಪು ಇಳಿದು ಆಫೀಸಿಗೆ ಹೋಗಿ "ಲಾರಿಯಲ್ಲಿ ಬರೀ ಈರುಳ್ಳಿ, ಆಲೂಗಡ್ಡೆ, ಮತ್ತೇನಿಲ್ಲ. ನೀವು ಪುನಃ ಪರಿಶೀಲಿಸಬೇಕಾದುದಿಲ್ಲ. ದಯವಿಟ್ಟು ಹೋಗಲು ಬಿಡಿ."

ಆಫೀಸಿನವ ಲಾರಿಯನ್ನು ಒಂದು ಸುತ್ತು ಹಾಕಿದ. ಮೇಲೆ ಟಾರ್‌ಪಾಲ್ ಮುಚ್ಚಿರಲಿಲ್ಲ. ಹೆಚ್ಚಿನ ಅನುಮಾನವೇನೂ ತೋರಲಿಲ್ಲ. ಅದರಲ್ಲೇ ಒಬ್ಬ ಪೋಲೀಸಿನವ ಬೇರೆ ಇದ್ದಾನೆ. ಅಂದಮೇಲೆ ಹೆಚ್ಚಿನ ಪರಿಶೀಲನೆ ಅನಗತ್ಯ ಎಂಬುದು ಅಂತ್ಯ ತೀರ್ಮಾನ. ಜೊತೆಗೆ ನಿದ್ದೆಯ ಮಂಪರ....ಲಾರಿಯ ನಂಬರನ್ನು ಬರೆದುಕೊಳ್ಳುವ ಗೋಜಿಗೂ ಹೋಗದೆ ಲಾರಿಗೆ ಹೊರಡಲು ಅನುಮತಿ ನೀಡಿದ!

ಲಾರಿ ದೊಡ್ಡ ಸದ್ದಿನೊಂದಿಗೆ ಹೊರಟಿತು. ಅಂಕುಡೊಂಕಿನ ರಸ್ತೆ. ಘೋರಾತಿ ಘೋರ ವರದಿಯನ್ನು ಇಬ್ಭಾಗವಾಗಿಸಿದ ಕರಿಯ ದಾರಿ. ನಿರ್ಜನ ಪ್ರದೇಶ. ಹೆಬ್ಬೆಟ್ಟಿದ ಮುಮ್ಮೆಯ್ಯ ಜಗತ್ಪಥ. ಲಾರಿ ಓಡುತ್ತಿದೆ....ಒಂದೇ ಸಮನೆ ಓಡುತ್ತಿದೆ.

ಲಾರಿಯ ಜನ ಮರಾಟಿಗರು. ಮೂವರೂ ಮರಾಟಿಯಲ್ಲಿಯೇ

ಮಾತಾಡುತ್ತಿದ್ದರೆ ಗೋಪಿಗೆ ತಲೆ ಚಿಟ್ಟು ಹಿಡಿಸುವಷ್ಟು ಕಿನಿಸಿಗೆ. ಹಾಗೇ ಹಿಂದಕ್ಕೆ ಒರಗಿದ. ಸ್ವಲ್ಪೇ ಹೊತ್ತಿನೊಳಗಾಗಿ ಕಣ್ಣಿಗೆ ನಿದ್ದೆ ಆವರಿಸಿತು. ಆ ನಿದ್ದೆಯಲ್ಲಿ ಒಂದು ಕನಸು.... ದಟ್ಟಾರಣ್ಯದಲ್ಲಿ ತಾನೊಬ್ಬನೇ ಕೆಳಗೆ ಬಿದ್ದಿದ್ದಾನೆ. ಯಾರೋ ದುರಾತ್ಮರು ಆಕ್ರಮಣ ಮಾಡುತ್ತಿದ್ದಾರೆ. ಗುದ್ದಿನ ಮೇಲೆ ಗುದ್ದು ಬೀಳುತ್ತಿವೆ. ತಕ್ಷಣ ಎಚ್ಚರವಾಯಿತು ಕಣ್ಣು ಬಿಟ್ಟು ನೋಡಿದ. ಲಾರಿ ಓಡುತ್ತಿತ್ತು. ಮತ್ತೆ ಹಾಗೇ ಕಣ್ಮುಚ್ಚಿದ. ನಿದ್ದೆಯ ಮಂಪರ ಆವರಿಸಿತು.

ಸ್ವಲ್ಪ ಹೊತ್ತು ಉರುಳಿರಲಿಕ್ಕಿಲ್ಲ. ಲಾರಿ ನಿಂತಿತು. ಲಾರಿಯ ಮಂದಿ ಅವನನ್ನು ಲಾರಿಯಿಂದ ಕೆಳಗೆ ತಳ್ಳಿ ಆಕ್ರಮಣ ಮಾಡಿದರು. ಅವರು ಮೂವರು, ಇವನೊಬ್ಬ ಎಷ್ಟು ಪ್ರಯತ್ನಿಸಿದರೂ ಸಾಧ್ಯವಾಗುತ್ತಿಲ್ಲ. ಅವನ ಪೋಲೀಸ್ ಉಡುಪನ್ನೂ ಕಿತ್ತುಕೊಂಡರು. ಇನ್ನೇನು ಕಲ್ಲಿನಿಂದ ಚಚ್ಚಿ ಸಾಯಿಸಬೇಕು, ಅಷ್ಟರೊಳಗಾಗಿ ಅವನು ತಪ್ಪಿಸಿಕೊಂಡು ಪಕ್ಕದ ಕಾಡಿಗೆ ಓಡಿ ಕಣ್ಮರೆಯಾದ. ಆದರೂ, ಉಳಿದುಕೊಂಡನಲ್ಲಾ ಎಂಬ ರೋಷದಿಂದ ರಸ್ತೆಯ ಬದಿಯಲ್ಲಿದ್ದ ಕಲ್ಲುಗಳನ್ನು ಎತ್ತಿ ಅವನು ಹೋದ ಕಡೆಗೆ ಒಗೆದರು. ಎಲ್ಲಿಯೂ ಅವನ ಸೊಲ್ಲು ಕೇಳಿಬರಲಿಲ್ಲ. ಗೋಪು ಒಂದು ಹೆಮ್ಮರವನ್ನು ಸರಸರನೆ ಏರಿ ಇವರ ಚಟುವಟಿಕೆಯನ್ನು ನೋಡುತ್ತಿದ್ದ. ಅವರು ಕೊಟ್ಟ ಐನೂರು ರೂಪಾಯಿಯೊಂದಿಗೆ ಇವನ ಕಳ್ಳಮಾಲೂ ಅವರ ಕೈ ಸೇರಿತು! ಲಾರಿಯ ಲೈಟಿನ ಬೆಳಕಿನಲ್ಲಿ ಅವರು ಹಲ್ಲು ಕಚ್ಚಿ ಕೈಕೈ ಮಸೆಯುತ್ತಿದ್ದುದನ್ನು ಕಂಡು ಗಡಗಡ ನಡುಗಿದ ಗೋಪು. ಹಗಲಾಗಿದ್ದರೆ ನನ್ನ ಪಿಂಡ ಮರ್ದನ ಮಾಡುತ್ತಿದ್ದರು, ರಾತ್ರಿಯಾಗಿ ಬದುಕಿಕೊಂಡೆ ಎಂದುಕೊಂಡ. ದೇಹದಾದ್ಯಂತ ಚಿಲ್ಲನೆ ಕಂಪನದ ಅಲೆ ಹರಿದಾಡಿ ಹೋಯಿತು. ಇನ್ನು ಬೆಳಗಾಗುವವರೆಗೆ ಇಳಿಯುವಂತೆಯೂ ಇಲ್ಲ. ರಾತ್ರಿಯ ಭಯ. ಕಾಡು ಪ್ರಾಣಿಗಳು ಆಕ್ರಮಿಸಿಯಾವು ಎಂಬ ಚಿಂತೆ: ಸಂಕಟ ಬಂದಾಗ ವೆಂಕಟರಮಣ ಎಂಬ ಯೋಚನೆಯಿಂದ ದೇವರ ಧ್ಯಾನ ಮಾಡಿಯೇ ಮಾಡಿದ.

ಎಷ್ಟು ಹೊತ್ತಿಗೆ ಬೆಳಗಾದೀತೋ ಎಂಬ ಗೀಳು. ದಟ್ಟ ಕತ್ತಲೆಯಿಂದಾಗಿ ದಿಕ್ಕುದೆಶೆಗಳ ಅರಿವೂ ಇಲ್ಲ. ಎಲ್ಲೋ ದೂರದಲ್ಲಿ ನರಿಗಳ ಹಿಂಡಿನ ಹುಯ್ಲು ಕಿವಿ ಗಡಚಿಕ್ಕುವಂತೆ ಕೇಳಿಸಿತು. ಆಗಾಗ, ಕಿರುಬ, ಚಿರತೆಗಳೂ ಘರ್ಜಿಸುತ್ತವೆ. ಮತ್ತೊಮ್ಮೆ ಹುಲಿಯೋ ಸಿಂಹವೋ ಘರ್ಜಿಸಿತು. ಅಬ್ಬಾ! ಎಂತಹ ಭಯಾನಕ!

ಗೋಪು ದೇಹದಾದ್ಯಂತ ನಡುಗಿದ. ಮರದಿಂದ ಕೆಳಕ್ಕೆ ಬಿದ್ದುಬಿಡುವೆನೋ ಎಂಬಷ್ಟು ನಡುಕ. ಮರವನ್ನುಬಿಗಿಯಾಗಿ ತಬ್ಬಿದ. ಒಮ್ಮೆ ರೊಯ್ಯನೆ ತಲೆ ತಿರುಗಿದಂತಾಯಿತು ಕೂಡ. ಆ ಕೂಡಲೆ, "ಅಯ್ಯೊ, ದೇವರೇ! ಇನ್ನೊಮ್ಮೆ

ತಲೆ ತಿರುಗಿದರೆ ಕೆಳಗೆ ಬೀಳುವುದೇ ಸೈ! ನನ್ನನ್ನು ಕಾಪಾಡು!" ಎಂದು ಮೊರೆಯಿಟ್ಟು ಕೊಂಡ ಕಾಣದ ದೇವರಿಗೆ ಕೈ ಮುಗಿದು.

ಕತ್ತಲೆ–ಕಣ್ಣು ತಿವಿಯುವ ಕತ್ತಲೆ. ಮಿಣುಕು ಹುಳುಗಳ ಅವತಾರವೂ ಇಲ್ಲ. ಕಣ್ಣು ಮುಚ್ಚಿದರೆ ನಿದ್ದೆ ಬರಬಹುದು ಎಂಬ ಭಯ. ಕಣ್ಣು ಬಿಟ್ಟರೆ ಕರಾಳ ಕತ್ತಲೆಯನ್ನು ಈಕ್ಷಿಸಲಾರದ ಭಯ. ಉಭಯ ಸಂಕಟದಲ್ಲಿ ಒಂದೊಂದು ಕ್ಷಣವೂ ಅಣಕಿಸುತ್ತ ಮುಂದುವರಿಯುವಷ್ಟು ಹಿಂಸ್ರಕ. ಆ ಧೂರ್ತರು ಕೈಗಡಿಯಾರವನ್ನೂ ಕಿತ್ತುಕೊಂಡಿದ್ದಾರೆ. ಎಷ್ಟೊಂದು ಹಣ ಹೋಯಿತು. ನಾನೊಂದು ಬಯಸಿದರೆ ವಿಧಿಯೊಂದು ಬಯಸಿತು.ಇಲ್ಲಿಯವರೆಗೆ ಕಾದಿಟ್ಟ ಹಣ ಕಂಡವರ ಪಾಲಾಯ್ತು. ಲಾರಿಯ ನಂಬರನ್ನು ಬರೆದಿಟ್ಟುಕೊಳ್ಳದೇ ಹೋದೆ....ಎಂಥ ಮೂರ್ಖತನ ನಾನು ಮೂರ್ಖ....ಖಂಡಿತ ಮೂರ್ಖ....

ನಿಷದ್ವರೀ ಸಾಮ್ರಾಜ್ಯದಲ್ಲಿ ನಿಶ್ಯಬ್ದ ನೀರವ....

ಗೋಪು ಸಂಕಟದಿಂದ ಹಲುಬುತ್ತಲೇ ಇದ್ದ. ಕಣ್ಣುಗಳು ಮತ್ತೆ ಮತ್ತೆ ತೊಯ್ಯುತ್ತಿದ್ದುವು. ಒಡಲು ದುಃಖದಿಂದ ತುಂಬಿ ಹೋಯಿತು. ಕ್ಷಣ ಕ್ಷಣವನ್ನು ಎಣಿಸುತ್ತಿದ್ದ. ಗಳಿಗೆಗಳಿಗೆಯನ್ನು ಗುಣಿಸುತ್ತಿದ್ದ.

ಅಂತೂ, ಹೊತ್ತು ಉರುಳಿತು. ಬ್ರಾಹ್ಮೀ ಮುಹೂರ್ತ ಆಡರಿ ತಂಗಾಳಿ ತಣ್ಣಗೆ ತೀಡತೊಡಗಿತು. ಯಾವುದೋ ಮರದಲ್ಲಿ ಬೃಹದ್ ಪ್ರಾಣಿ ಕೊಂಬೆ ಯಿಂದ ಕೊಂಬೆಗೆ, ಮರದಿಂದ ಮರಕ್ಕೆ ನೆಗೆದು ಗಲಗಲ ಸದ್ದು ಮಾಡಿತು. ಮೈಯ್ಯೆಲ್ಲಾ ನಡುಗುವಂತೆ.

ಬಹುಶಃ ಚಿಪ್ಪಾಂಜಿ ಇರಬಹುದೆ?

ಶಿವಶಿವಾ! ಯಾವ ಪ್ರಾಣಿಯೂ ಈ ಬಳಿಯಲ್ಲಿ ಸುಳಿಯದಿರಲಿ....

ಕಗ್ಗಾಡಿನ ಕತ್ತಲೆಯಲ್ಲಿ ಮಂಜಿನ ಆಕೃತಿಯೊಂದು ಕಂಡು ಬಂತು. ಅದು ನೆಲದ ಮೇಲಿಲ್ಲ. ಅಂತರಪಟಲದಂತೆ ತೇಲುತ್ತಿದೆ. ಪಿಶಾಚಿಯೋ ಭೂತವೋ ದೇವರಿಗೇ ಗೊತ್ತು! ಗೋಪು ನೋಡಿಯೇ ನೋಡಿದ. ಆಕಾರರಹಿತವಾದ ಮಂಜಿನ ಬೊಂಬೆಯಂತಹ ಆ ಆಕೃತಿ ಸನಿಹದಲ್ಲಿಯೇ ಸುತ್ತಾಡುತ್ತಿದೆ. ಕ್ಷಣ ಕ್ಷಣಕ್ಕೂ ಬೆಳೆಯುತ್ತಿದೆಯೋ ಎಂದೆನಿಸುವಂತಹ ಬೃಹದ್ರೂಪ. ಅದೇ ಸಮಯಕ್ಕೆ ಎಲ್ಲಿಯದೋ 'ಕೂೂವೊೂೂೕ' ಎಂಬ ಉಚ್ಚದನಿಯ ಕೂಗು! ಗೋಪು ಮರವನ್ನು ಬಿಗಿಯಾಗಿ ಎರಡೂ ಕೈಗಳಿಂದ ಅಪ್ಪಿಕೊಂಡ. ಕೈಕಾಲುಗಳು ಗಡಗಡ ನಡುಗಿದುವು. ಈಗಲೀಗ ಮರದಿಂದ ಕೆಳಗೆ ಬೀಳುವುದೇ ಸೈ ಎನಿಸಿ ಬಡಜೀವ ಹೆದರಿಹೋಯಿತು. ಪುನಃ ಪುನಃ 'ಕೂೂವೊೂೂೕ' ಎಂಬ ಕೂಗು ಮೊಳಗಿತು.

ಆ ಮೊಳಗು ಪ್ರಾಣಿಯದಂತೂ ಅಲ್ಲ. ದೆವ್ವದ ಮೊಳಗೇ ಇರಬೇಕು. ಇಂದು ನಾನಂತೂ ಬದುಕಿ ಉಳಿಯಲಾರೆ ಎಂಬ ದೃಢ ನಿರ್ಧಾರಕ್ಕೆ ಬಂದ. ಮರುಗಳಿಗೆಯಲ್ಲೇ ಸಾವಿಗೇಕೆ ಹೆದರಬೇಕು? ಕ್ಷುದ್ರ ಸಾವು ಬರುವುದಾದರೆ ಬರಲಿ. ವಿಧಿ ಇದಕ್ಕಿಂತ ಇನ್ನೇನು ಮಾಡೀತು? ಮತ್ತೇಕೆ ಭಯ? ಹೇಗೂ ನನ್ನ ಸರ್ವಸ್ವವೂ ಕಳೆದು ಹೋಗಿದೆ....ಎಂಬ ಒಣ ಧೈರ್ಯ.

ಆ ಮಂಜಿನ ಮೂರ್ತಿ ಅತ್ತ ಇತ್ತ ಸರಿದಾಡುತ್ತಲೇ ಇದೆ. ಒಮ್ಮೆ ಮರದ ಸುತ್ತ ಸುತ್ತಿದರೆ ಇನ್ನೊಮ್ಮೆ ಮರದ ಎತ್ತರಕ್ಕೂ ಏರುತ್ತದೆ. ಅಬ್ಬಾ! ಮರದ ಎತ್ತರ! ಒಣ ಧೈರ್ಯ ಬುಡ ಮೇಲಾಯಿತು. ಕಣ್ಣುಗಳಿಗೆ ಕತ್ತಲೆಯ ತೆರೆ ತಿವಿಯುತ್ತಿದೆ. ಮೈಯೆಲ್ಲಾ ನಡುಕ. ಕೊಂಬೆಯನ್ನು ಇನ್ನಷ್ಟು ಬಿಗಿಯಾಗಿ ತಬ್ಬಿದುವು ಕೈಗಳು. ಗಂಟಲಾರಿ ಜೀವ ಈಗಲೀಗ ಚಿಮ್ಮುವಂತೆ ತೋರಿ ಕಣ್ಣು ಮುಚ್ಚಿದ. ಹೃದಯ ಬಿರಿಯುವಂತೆ ವ್ಯಾಪ್ತಿಗೆ ಮೀರಿ ಮಿಡಿಯುತ್ತಿದೆ ದಡ. ದಡ. ದಡ. ದಡ. ಅವಾಸ್ತವಿಕತೆಯೊಡನೆ ಸಂಧಿಮಾಡಿಕೊಂಡು ಒಳ್ಳಿತನ್ನು ಬಯಸಿ ಈಗ ಆದುದೇನು ? ವ್ಯಾಕುಲ ಭಾರದಿಂದಲೋ, ಯೋಚನಾಭಾರದಿಂದಲೋ ಉತ್ತರ ದೊರೆಯಲಿಲ್ಲ. ಪ್ರಶ್ನೆಪ್ರಶ್ನೆಯಾಗಿಯೇ ಉಳಿಯಿತು.

ಕೂವೋ! ಕೂವೊೋ!

ಅದೇ ಸಮಯಕ್ಕೆ ದೂರದಲ್ಲೆಲ್ಲೋ ಕಾಡು ಕೋಳಿಯೊಂದು ಕೂಗಿತು, ಕೊಕ್ಕೋಕೋೀ!

“ಅಯ್ಯೋ! ಬೇಗನೆ ಬೆಳಗಾಗಲಿ ದೇವರೇ!” ಎದೆಯ ಹಕ್ಕಿ ತಾನೇ ತಾನಾಗಿ ಚೀರಿತು.

ಆ ಕೂಡಲೇ ಮಂಜಿನ ಭೂತ ಆಕ್ರಮಣ ಮಾಡಿತು! ಕುಳಿತಲ್ಲೇ ಹೆಣಗಿದ. ಒದ್ದಾಡಿದ. ಚೀರಲು ಬಾಯ್ದೆರೆದರೆ ದನಿಯೇ ಹೊರಡಲಿಲ್ಲ. ಮೈಮೇಲೆ ಹತ್ತಿ ಅಮುಕುತ್ತಿದೆ. ಅಬ್ಬ! ಮಣಭಾರ! ಕೊಸರಾಡಿದ....ಕೊಸರಾಡಿ, ಕೊಸರಾಡಿ ಕೆಳಗೆ ಉರುಳಿ ಬಿದ್ದ.

ದೊಪ್ಪನೆ ಬಿದ್ದ ಸದ್ದು ಪರಿಸರದಲ್ಲಿ ಮೊಳಗಿತು. ಅನಂತರ ಏನಾಯಿತೋ ಅವನಿಗೆ ತಿಳಿಯಲಿಲ್ಲ.

ಗಿಡ ಮರದೆಲೆಗಳ ವಾರಾಸಿ ಮರ್ಮರಿಸುತಲೇ ಇತ್ತು.

## ೧೬

ಜೀವನ ಯಾವತ್ತೂ ನೆರಳು ಬೆಳಕುಗಳ ಜೋಡಣೆ....ತನ್ನ ಜೀವನಕ್ಕೆ ಮಾತ್ರ ಬೆಳಕು ಬಂದೇ ಇಲ್ಲವೇನೊ....ಎಂಬಷ್ಟು ಸಂಶಯ....ಬಾಲ್ಯದಾರಭ್ಯ ತಾನು ಬಯಸಿದ್ದೇನೋ....ಭಗವಂತ ನೀಡಿದ್ದೇನೋ....ಅಣ್ಣನ ಮಕ್ಕಳ ಕೂಡ ಸರಸವಾಡಿದ ಮಧುರಾನುಭವಗಳನ್ನು ಬಿಟ್ಟರೆ ಜೀವನ ಯೋಗ ಕರ್ಮಮಯವೇ ಆಗಿದ್ದರೂ....ಸಂಸಾರ ರಥ ಕುಂಟುತ್ತಲೇ ಸಾಗಿತು. ಕಿಂಚಿತ್ತಾದರೂ ಜೀವನ ಸೌಖ್ಯ ಈ ಬಳಿಯಲ್ಲಿ ಸುಳಿಯಲಿಲ್ಲ....ವರ್ತಮಾನ ಯುಗಧರ್ಮವನ್ನು ಅರಿಯದ, ಜೀವನಧ್ಯೇಯವನ್ನು ರೂಪಿಸಿಕೊಳ್ಳದ....ನಾಗರಿಕಜೀವನಕ್ಕೆ ಹೊಂದಿಕೊಳ್ಳದ...ವ್ಯಕ್ತಿಯ ನೆರಳು ಈಗೀಗ ತುಂಬಾ ಅಸಹ್ಯ....ತನ್ನ ಮಾನಸಿಕ–ಬೌದ್ಧಿಕ ಪ್ರಪಂಚದ ಆಚೆ ವಿಶಾಲ ಪ್ರಪಂಚವಿದೆಯೆಂದೂ ಅದರ ಧ್ಯೇಯ ಧೋರಣೆಗಳು ಬೇರೆಯಾಗಿದ್ದು ನವ ಚೈತನ್ಯ ತರಂಗಗಳು ಬಿರುಸಾಗಿ ಏಳುತ್ತಿವೆ ಯೆಂದೂ....ಅದರ ಉಷ್ಣೋಷ್ಣ ತರಂಗಗಳು ಅತ್ತಲಿತ್ತ ತಾಕಲಾಡಿ ಬಿಸಿ ಹವೆ ಮೈಗೆ ತಾಕುತ್ತಿವೆಯೆಂದೂ ಅಂದಿಂದಿಗೂ ತಿಳಿದು ಬಂದ ಅನುಭವ ಆತನಿಗೆ. ಆದರೂ, ಸಂಜೀವನ ರೇಖೆಯನ್ನು ದಾಟಿ ಹೋಗಿದ್ದಾನೇಕೆ? ಅದೇ ಅರ್ಥ ವಾಗುತ್ತಿಲ್ಲ....ಅಶಾಂತಿಯ ಬೆಂಕಿಯಿಂದ ಸುಡುತ್ತಿರುವಾಗಲೂ ಆಲೋಚನೆಯ ಗರಿ ಕೆದರಲಿಲ್ಲವೇಕೆ ? ಜೀವನಯಜ್ಞದ ಗುರಿಯೇನು ? ದೂರಗಮ್ಯಸ್ಥಾನ ಯಾವ ಕಡೆಗಿದೆ ?....ಕ್ರಮಿಸಲೇಬೇಕಾದ ದಾರಿಯಲ್ಲಿನ ಕಲ್ಲು ಮುಳ್ಳುಗಳ ಪಾತ್ರವೇನು?....ಅವು ಎಂದಾದರೂ ಪಾಠ ಕಲಿಯಲು ಸಹಾಯ ಮಾಡುತ್ತವೆಯೇ?....ಈ ವಿಶಾಲ ಭೂಮಂಡಲದ ಮೇಲೆ ನಡೆಯುತ್ತಿರುವ ಸತ್ಕಾರ್ಯಗಳನ್ನನುಸರಿಸುವುದಕ್ಕಿಂತ ದುಷ್ಕಾರ್ಯಗಳನ್ನನುಸರಿಸುವವರೇ ಹೆಚ್ಚು. ಅಂದಮೇಲೆ ನವಚೈತನ್ಯ ತರಂಗಗಳು ಏಳುವುದೇ ದುಷ್ಕಾರ್ಯದ ಮೂಸೆಯಲ್ಲಿ. ಅದೇ ಈಗ ಬಂದಿರುವ ಸಂಕಷ್ಟ....

ಮೋಹಿನಿಯು ಮನದಲ್ಲಿ ನಡೆಯುವ ಅದ್ಭುತ ಕೋಲಾಹಲವನ್ನು ಹಾಗೇ ಅದುಮಿ ತನ್ನನ್ನು ತಾನು ನಿಗ್ರಹಿಸಿಕೊಳ್ಳುತ್ತ ಮನೆಯ ಮೆಟ್ಟಿಲಿಳಿದಳು.

ಬೆಳಿಗ್ಗೆ ಒಂಭತ್ತರ ಸಮಯ. ಎಲ್ಲೆಲ್ಲಿಯೂ ಬೆಚ್ಚನೆಯ ಹೂಬಿಸಿಲಿನ ಹರವು.

ಅರುಣಾರುಣ ಬೆಳ್ಮುಗಿಲಿನ ದಿಣ್ಣೆಯನ್ನೇರಿದ್ದಾನೆ. ಬಾನ್ ಬಯಲ ಬೆಚ್ಚನ್ನ ಬಿಸಿಲು ಭೂಮಂಡಲವನ್ನೆಲ್ಲಾ ವ್ಯಾಪಿಸಿಬಿಟ್ಟಿದೆ. ಬೆಳಗಿನ ಪ್ರಕೃತಿಯ ಬಹಿರಂಗ

ವ್ಯಾಪಾರ ಎಷ್ಟೊಂದು ಸುಖಕರವೋ ಅಷ್ಟೇ ಆಂತರಂಗಿಕ ವ್ಯಾಪಾರ ಅಲ್ಲೋಲ ಕಲ್ಲೋಲ. ಹಾದಿಯಂಚಿನ ಪಥದಲ್ಲಿಯೇ ನಡೆದು ಬೇಕರಿ ಮುಟ್ಟಿದಾಗ ಅಲ್ಲಿ ಜನಗಳ ಪರಿಷೆಯೋ ಪರಿಷೆ. ಅದ್ಭುತ ವ್ಯಾಪಾರದ ಬಿಸಿಯನ್ನು ಕಂಡು ಯಜಮಾನ ಸಿಗುವುದು ಅನುಮಾನ ಎಂದಿತು ಮನಸ್ಸು.

"ನಿಜ" ಎಂದುಕೊಂಡೇ ಒಳಹೋದಳು ಮೋಹಿನಿ. ಕೈಗೆ ಬಿಡುವಿಲ್ಲದಷ್ಟು ಕೆಲಸ. ಯಜಮಾನ ಟೀ ಕುಡಿಯಲು ಒಳ ಬಂದರೆ ಮಾತಾಡಬಹುದೆಂಬ ನಿರೀಕ್ಷೆ. ಒಳ ಹಜಾರದಲ್ಲಿಯೇ ಕೆಲಸ. ದೋಬಿಗೆ ಕೊಟ್ಟ ಬಟ್ಟೆಗಳ ಲೆಕ್ಕ ಮತ್ತು ಮಾಸಲು ಬಟ್ಟೆಗಳನ್ನು ನೀಡುವ ಕಾಯಕ. ಅವಳ ಕೆಲಸ ಮುಗಿಯುವುದರೊಳಗಾಗಿ ಯಜಮಾನ ಒಳಬಂದ. ಅವನನ್ನು ನೋಡುತ್ತಲು ಹೃದಯ ಹಗುರವಾದರೂ ತಕ್ಷಣವೇ ಮಾತನಾಡಿಸಲು ಭಯ-ಸಂಕೋಚ. ಅಳುಕುತ್ತಲೇ ತಲೆಯೆತ್ತಿ ನೋಡಿದಳು. ಅವನೇ ಕೇಳಿದ,

"ನಿನ್ನ ಬಾಲವಾಡಿಯ ವ್ಯವಹಾರ ಎಲ್ಲಿಯವರೆಗೆ ಬಂತು?"

"ನಮ್ಮ ಕಾಲೋನಿಯಲ್ಲಿಯೇ ಇಪ್ಪತ್ತೆರಡು ಮಕ್ಕಳು ಬರುತ್ತಾರೆ. ಮನೆಯಲ್ಲಿ ಸ್ಥಳ ಸಂಕೋಚ. ಬೇರೆ ಮನೆ ಸಿಕ್ಕಿಲ್ಲ; ಹುಡುಕುತ್ತಿದ್ದೇನೆ. ಆಟಿಕೆಗಳು, ಕುರ್ಚಿ-ಡೆಸ್ಕುಗಳು-ಪುಸ್ತಕ, ಪೆನ್ಸಿಲ್‌ಗಳು ಹೀಗೆ ಅನೇಕ ಪದಾರ್ಥಗಳನ್ನು ಕೊಳ್ಳಬೇಕು. ಹಣದ ವ್ಯವಸ್ಥೆಗಾಗಿ ಏನು ಮಾಡುವುದೋ ತಿಳಿಯುತ್ತಿಲ್ಲ. ಅದೇ ತುಂಬಾ ಕಷ್ಟಕ್ಕೆಬಂದಿದೆ. ಹಣ ದೊರೆತರೆ ಪ್ರತಿ ತಿಂಗಳೂ ಕಂತು ಕಟ್ಟಿ ತೀರಿಸಬಹುದು. ಏನು ಮಾಡಲಿ?" ಮೈಯೆಲ್ಲಾ ಸಂಕೋಚದ ಮುದ್ದೆಯಾಗಿ ನುಡಿದಳು ಮೋಹಿನಿ. ಶುಷ್ಕ ತುಟಿಗಳನ್ನು ಒರಿಸಿತು ನಾಲಿಗೆ.

ಯಜಮಾನ ಸ್ವಲ್ಪಹೊತ್ತು ಯೋಚಿಸುತ್ತ ಅಲ್ಲೇ ಪದಚಾರಣ ಮಾಡಿದ. ಒಂದೆರಡು ಗಳಿಗೆಯ ಬಳಿಕ ಕೇಳಿದ "ನೀನು ಬೆಳಿಗ್ಗೆ ಬಾಲವಾಡಿ ನಡೆಸಿ, ಮಧ್ಯಾಹ್ನ ಇಲ್ಲಿ ಕೆಲಸ ಮಾಡಲಾಗುತ್ತದೆಯೇ? ನಿನಗೆ ಸಮಯ ಸಂಕೋಚ ಎನಿಸುತ್ತದೆಯೇ?"

"ಅದೇನಿಲ್ಲ ಕೆಲಸ ಮಾಡಬಲ್ಲೆ...."

"ನಿನಗೆ ಒಂದು ಸಾವಿರ ರೂಪಾಯಿ ಕೊಡುವೆ. ಸಧ್ಯ ಏನೇನು ಸಾಮಾನು ಬೇಕೋ ಕೊಂಡುಕೊ. ಮೊದಮೊದಲು ಸ್ವಲ್ಪದರಲ್ಲಿ ಆರಂಭಿಸು. ಅನಂತರ ಕ್ರಮಕ್ರಮವಾಗಿ ಹೆಚ್ಚಿಸಿಕೊ."

"ತುಂಬಾ ಉಪಕಾರವಾಯಿತು. ನೀವೇ ನನ್ನ ತಂದೆ. ಇಷ್ಟು ಉದಾರತೆ ತೋರಿದ್ದು ನನ್ನ ಪುಣ್ಯ."

"ದೈವ ಸಂಕಲ್ಪ."

ಅವಳ ಮುಖಭಾವವೇ "ಹೌದು" ಎಂಬುದನ್ನು ಸೂಚಿಸಿತು.

ಯಜಮಾನ ಹೊರಹೋದ. ವೃದ್ಧ ಶರೀರ ಹೊಸ್ತಿಲು ದಾಟುವುದನ್ನು ಹಿಂದಿಲಿಂದ ಕೃತಜ್ಞತೆ ತುಂಬಿದ ನಯನದ್ವಯಗಳು ನಿಟ್ಟಿಸಿದುವು. ಇಂಥ ಪುಣ್ಯಾತ್ಮರೂ ಕಲಿಕಾಲದಲ್ಲಿ ಇದ್ದಾರಲ್ಲಾ ಎಂದು ಅಂತರಾತ್ಮ ಕೂಗಿಹೇಳಿತು.

ಮೋಹಿನಿ ತನ್ನ ಕೆಲಸ ಕಾರ್ಯದಲ್ಲಿ ಮನವಿಟ್ಟಳು. ಮಕ್ಕಳಿಗೆ ಬೇಕುಬೇಕಾದ ಆಟಿಕೆಯ ಪಟ್ಟಿ ಮನದಲ್ಲೇ ತಯಾರಾಗುತ್ತಿತ್ತು. ಏನಾದರಾಗಲಿ, "ಹುಟ್ಟಿಸಿದ ದೇವರು ಹುಲ್ಲು ಮೇಯಿಸುತ್ತಾನೆ" ಎಂಬ ಮಾತು ಸುಳ್ಳಲ್ಲ; ಎಂದುಕೊಂಡಳು ಮೋಹಿನಿ.

ಮಧ್ಯಾಹ್ನ,

ಒಂದೂವರೆ ಗಂಟೆ ಸಮಯ. ಮನೆಗೆ ಹೊರಡುವ ಹೊತ್ತು. ಯಜಮಾನ ಇನ್ನೂ ಒಳ ಬಂದಿರಲಿಲ್ಲ. ಹಣ ತೆಗೆದುಕೊಂಡು ಹೋಗುವ ಸಲುವಾಗಿ ಸ್ವಲ್ಪ ಹೊತ್ತು ಕಾದಳು, ಮೋಹಿನಿ.

ಗಿರಾಕಿಗಳು ಹೊರಟು ಹೋದ ನಂತರ ಯಜಮಾನ ಒಳಬಂದು "ಮೋಹಿನಿ, ನಿನಗೆ ಹೊತ್ತಾಯಿತೇ?" ಎಂದು ಕೇಳಿದ. ಮುಖದಲ್ಲಿ ಸತ್ಯ ಸಂಕಲ್ಪದ ಮುದ್ರೆ ಮುದ್ರಿತವಾಗಿದ್ದಷ್ಟು ಪ್ರಸನ್ನತೆ.

"..............."

ಮೋಹಿನ ಉತ್ತರಿಸಲು ಪ್ರಯತ್ನಿಸಿದಳಾದರೂ ಮಾತು ಹೊರಡಲಿಲ್ಲ.

ಒಳಹೋಗಿ ಸಾವಿರ ರೂಪಾಯಿಗಳನ್ನು ತಂದು ಅವಳ ಕೈಗೆ ನೀಡುತ್ತ "ನೋಡು, ನಿನ್ನ ಮೂವರು ಹೆಣ್ಣುಮಕ್ಕಳ ಉದ್ಧಾರಕ್ಕಾಗಿ ನೀಡುತ್ತಿರುವೆ. ಶಾಲೆ ಶುರುವಾದ ನಂತರ ಮಧ್ಯಾಹ್ನದ ಮೇಲೆ ಬಂದು ಕೆಲಸ ನಿರ್ವಹಿಸು. ನಿನ್ನ ಶ್ರಮನಿಷ್ಠೆ-ಧರ್ಮನಿಷ್ಠೆಗಳನ್ನು ನಾನು ತುಂಬ ಮೆಚ್ಚಿಕೊಂಡಿರುವೆ. ದೇವರು ನಿನಗೆ ಒಳ್ಳೆಯದು ಮಾಡಲಿ."

"ಹಣ ಕೊಟ್ಟ ಬಗ್ಗೆ ಪತ್ರ....?" ಸಂಕೋಚಿಸುತ್ತಲೇ ಕೇಳಿದಳು ಅವಳು.

"ಏನೂ ಬೇಡ ಹೋಗಮ್ಮ."

ಆಗ ಅವಳಿಗಾದ ಸಂತೋಷಕ್ಕೆ ಪಾರವೇ ಇರಲಿಲ್ಲ. ಹಣವನ್ನು ಕರವಸ್ತ್ರದಲ್ಲಿ ಸುತ್ತಿ ಜಾಕೆಟ್ಟಿನಲ್ಲಿ ಇಟ್ಟುಕೊಂಡು ಮನೆಗೆ ಹೋದಳು. ಅಂದೇ ಕಮಲಾ-ಸುಮನಾ ಇವರೊಡಗೂಡಿ ಬಾಲವಾಡಿಗೆ ಬೇಕು ಬೇಕಾದ ಆಟಿಕೆ ಸಾಮಗ್ರಿಗಳನ್ನು ವಿಕ್ರಯಿಸಿದ್ದಾಯ್ತು. ಮನೆಯ ಮುಂದಿನ ಕೊಠಡಿ ಮತ್ತು

ವರಾಂಡಗಳನ್ನು ಬಾಲವಾಡಿಗಾಗಿ ತೆರವು ಮಾಡಿ ವಸ್ತುಗಳನ್ನು ಅನುಕ್ರಮವಾಗಿ ಜೋಡಿಸಿ ಅಲಂಕರಿಸಿದಳು ಮೋಹಿನಿ. ಆದರೆ, ಅದೊಂದು ಕಿಷ್ಕಿಂದಾಪುರಿ. ಹೆಚ್ಚಿನ ಸಾಮಾನುಗಳನ್ನು ಅಡಕಿದುದರಿಂದ ಮತ್ತಷ್ಟು ಕಿಷ್ಕಿಂದ. ಎಷ್ಟೆಷ್ಟು ಹೊಂದಿಸಿದರೂ ಸರಿಪಡಿಸಲಾಗದ ಪರಿಸ್ಥಿತಿ.

ಜೇಷ್ಠಮಾಸದ ಒಂದನೇ ತೇದಿ.

ಪೋಲೀಸ್ ಕಾಲೋನಿಯ ತಾಯಂದಿರೆಲ್ಲಾ ತಮ್ಮ ತಮ್ಮ ಮಕ್ಕಳನ್ನು ಎಂಟು ಗಂಟೆಗೆ ಸರಿಯಾಗಿ ಕರೆತಂದರು. ಮಕ್ಕಳಿಗೆ ಅಷ್ಟೊಂದು ಆಟಿಕೆಗಳನ್ನು ನೋಡಿದರೆ ಆಟವಾಡುವ ಸಂತಸ....ಇಲ್ಲೇ ಬಹಳ ಹೊತ್ತು ಉಳಿಯಬೇಕಲ್ಲ ಎಂಬ ಕೊರಗು. ಅಳು....ಅಳು....ಮುಸಿ ಮುಸಿ ಅಳು. ನಗು....ನಗು....ಕಿಲ ಕಿಲ ನಗು.

ಹೊಸ ಸ್ಥಳ–ಹೊಸ ಮುಖಗಳ ಭಯವಿಲ್ಲದ ಮಕ್ಕಳಿಗೆ ಸಂತಸ ಮತ್ತು ಆನಂದ.

ಸಂಕುಚಿತ ಮನೋಭಾವದ ಮಕ್ಕಳಿಗೆ ಕಿರಿಕಿರಿ ಮತ್ತು ಕಣ್ಣಿನಲ್ಲಿ ನೀರು.

ಇತರ ಸಹಾಯಕರಿಲ್ಲದೆ ಇಪ್ಪತ್ತೆರಡು ಮಕ್ಕಳ ಸುಧಾರಣೆ ಸಾಮಾನ್ಯವಲ್ಲ. ಸ್ವಲ್ಪಕಾಲ ಶಾಲೆಯ ಉಸ್ತುವಾರಿಯನ್ನು ತಾನೇ ನೋಡಿಕೊಂಡರೆ ಅನಂತರ ಬೇರೆಯವರನ್ನು ನೇಮಿಸಿಕೊಳ್ಳುವ ಯೋಚನೆ. ಅಂತೂ, ಮಕ್ಕಳ ಲಾಲನೆ–ಪಾಲನೆ–ಬೋಧನೆ ಏಕಮುಖವಾಗಿ ನಡೆದರೂ ಹಾಲು–ಬಿಸ್ಕತ್ತುಗಳ ಹಂಚಿಕೆ ಕಷ್ಟವೇ ಆಯಿತು. ಸಧ್ಯ, ಸ್ವಲ್ಪ ಸಮಯ ಚಂದ್ರಿಯ ಸಹಾಯ ಪಡೆಯುವುದು ಒಳ್ಳೆಯದು ಎನಿಸಿದಾಗಲೇ ಬಾಗಿಲಲ್ಲಿ ಚಂದ್ರಿ ಕಾಣಸಿಕೊಂಡಳು.

"ಬಾ ಚಂದ್ರಿ! ನಿನಗೆ ನೂರು ವರ್ಷ ಆಯಸ್ಸು! ಈಗಷ್ಟೆ ನೆನೆಸಿಕೊಂಡೆ ನಿನ್ನ!"

"ನಿಜವಾಗಿ....?"

"ಹೌದು ಕಣೆ! ನಿನ್ನ ಸಹಾಯ ಪಡೆಯುವುದು ಒಳ್ಳೆಯದು ಎನಿಸುವಾಗಲೇ ನೀನು ಬಂದಿದ್ದೀ!"

ಅವಳು ಮಂದಸ್ಮಿತಳಾಗಿ ಮೋಹಿನಿಯ ಸಹಾಯಕ್ಕೆ ನಿಂತಳು.

"ಚಂದ್ರಿ! ದಿನವೂ ನಿನ್ನ ಮನೆಗೆಲಸ ಮುಗಿದ ಮೇಲೆ ಇಲ್ಲಿಗೆ ಬಾ. ಒಬ್ಬಳೇ ಸಾವರಿಸುವುದು ಕಷ್ಟ. ಮೇಲಾಗಿ,ಈಗಲೇ ಸಹಾಯಕರನ್ನು ನೇಮಿಸಿಕೊಳ್ಳುವುದು ಹಣದ ಕೊರತೆಯಿಂದ ಸಾಧ್ಯವಿಲ್ಲ. ಹೇಗೂ ಮನೆಯಲ್ಲಿ ಒಬ್ಬಳೇ ಇರುತ್ತಿ. ಇಲ್ಲಿಗೆ ಬಂದರೆ ಸಮಯ ಸರಾಗವಾಗಿ ಕಳೆಯುತ್ತೆ."

"ಆಗಲಿ, ಮೋಹಿನಿ! ಪುಣ್ಯಕಾರ್ಯ!"

ಹನ್ನೆರಡುವರೆಯವರೆಗೆ ಬಾಲವಾಡಿಯ ಚಟುವಟಿಕೆ. ಅನಂತರ ಅವರವರ ತಾಯಂದಿರು ಬಂದು ಮಕ್ಕಳನ್ನು ಕರೆದೊಯ್ದರು. ಹರಡಿ ಬಿದ್ದಿದ್ದ ಆಟಿಕೆ-ಕುರ್ಚಿ-ಡೆಸ್ಕುಗಳನ್ನು ಜೋಡಿಸಿಟ್ಟು ಮನೆಗೆಲಸದಲ್ಲಿ ನಿಮಗ್ನಳಾದಳು ಮೋಹಿನಿ.

ಹೊತ್ತು ಉರುಳಿತು. ಶಾಲೆಯಿಂದ ಮಕ್ಕಳು ಆಗಮಿಸಿದರು.

ಮೋಹಿನಿ ಸ್ವಲ್ಪ ಅಕ್ಕಿ ಮಾತ್ರ ತಂದಿದ್ದಳು. ಅದರದೇ ಗಂಜಿ ಊಟ.

"ಅಮ್ಮಾ! ತರಕಾರಿ ಬೇಳೆ ಏನೂ ತರಲಿಲ್ಲವೇ?" ಎಂದಳು ಸಕ್ಕೂ. ಮುಖದಲ್ಲಿ ಕಳಕಳಿಯ ಭಾವ.

"ಸ್ವಲ್ಪ ದಿನ ತಾಳಿಕೊಳ್ಳಿ. ಶಾಲೆ ಒಂದು ವ್ಯವಸ್ಥಿತ ರೀತಿಗೆ ಬಂದ ಮೇಲೆ ತರೋಣ."

ಆ ಮಾತು ಅಂತರಂಗವನ್ನು ಮುಟ್ಟಿತು. ಒಂದೆರಡುಗಳಿಗೆ ಸುಮ್ಮನಿದ್ದು ಪುನಃ ನುಡಿದಳು.

"ಹಾಗಾದರೆ ಈ ತಿಂಗಳೆಲ್ಲಾ ಹೀಗೆಯೇ....?"

"ಬೇಕರಿ ಯಜಮಾನರಿಂದ ತಂದ ಹಣ ಮತ್ತು ಮಕ್ಕಳ ಫೀಜು ಪೂರಾ ಶಾಲೆಯ ಪರಿಕರಣಕ್ಕೇ ಆಗಿದೆ. ನನಗೆ ಸಾಲ ತರುವುದು ಇಷ್ಟವಿಲ್ಲ. ಈ ಒಂದು ತಿಂಗಳು ಹೇಗಾದರೂ ಸುಧಾರಿಸಿಕೊಳ್ಳಿ."

ಮೂವರು ಮಕ್ಕಳ ಮುಖಬಿಂಬವೂ ಬಾಡಿ ಹೋಯಿತು.

"ಮಧ್ಯಾಹ್ನ ಬೇಕರಿಗೆ ಹೋಗುವೆ ಅಲ್ಲಿಂದ ತರುವ ಪದಾರ್ಥ ನಿಮಗೇ ಇರಲಿ."

ಮಕ್ಕಳು ಉಂಡು ಕೈತೊಳೆದರು. ಬಾಲವಾಡಿಯನ್ನು ತಾವೂ ನೋಡಬೇಕು ಎಂಬ ಆಸೆ ಮನದಲ್ಲಿ....ತಮ್ಮ ಶಾಲೆಯೂ ಬೆಳಿಗ್ಗೆಯೇ ತೆರೆಯುವುದರಿಂದ ಶಾಲೆಗೆ ಹೋಗಲೇ ಬೇಕು. ಶಾಲೆಯಿಂದ ಹಿಂದಿರುಗುವಷ್ಟರಲ್ಲಿ ಬಾಲವಾಡಿ ಮುಚ್ಚಿರುತ್ತದೆ. ಆದ್ದರಿಂದ ಬಾಲವಾಡಿ ನೋಡುವಂತಿಲ್ಲ. ಆದ್ದರಿಂದ ನಾವೇಕೆ ಒಂದಿನ ರಜೆತೆಗೆದುಕೊಳ್ಳಬಾರದು? ಎಂಬ ಯೋಚನೆ ಮಕ್ಕಳಿಗೆ.

"ನಾವೊಂದಿನ ರಜೆ ತೆಗೆದುಕೊಂಡರೆ ಮಕ್ಕಳ ಕೂಟವನ್ನು ನೋಡಬಹುದು.... ಅಮ್ಮಾ ನಾವು ರಜೆತೆಗೆದುಕೊಳ್ಳೋಣವೇ ?"

"ಪಾಠಕ್ಕೇನು ಮಾಡುತ್ತೀರಿ ?"

"ಗೆಳತಿಯಿಂದ ನೋಟ್ಸ್ ತೆಗೆದುಕೊಂಡರಾಯಿತು."

"ಒಬ್ಬೊಬ್ಬರು ಒಂದೊಂದು ದಿನ ತೆಗೆದುಕೊಳ್ಳಿ. ಅಲ್ಲಿಗೆ ಮೂರು ದಿನ

ನಿಮ್ಮ ಸಹಾಯ ನನಗೆ ದೊರೆಯುತ್ತದೆ. ನಿಮಗೂ ಮಕ್ಕಳ ಕೂಟ ನೋಡುವ ಅವಕಾಶ ಸಿಗುತ್ತೆ."

ಆ ಮಾತಿಗೆ ಒಪ್ಪಿದರು ಮಕ್ಕಳು.

"ನಾಳೆ ನಾನು ಮನೆಯಲ್ಲಿರುವೆ!" ಎಂದಳು ನೀನಾ.

"ನಾನಿರುವೆ ನೀನಾ!" ಕೇಳಿಕೊಂಡಳು ಮೀನಾ.

"ನಾನು ಮೊದಲು ಹೇಳಿದ್ದು!"

"ಹೋಗಲಿ, ಬಿಡು ಮೀನಾ, ನಾಡಿದ್ದು ನೀನು ಮನೆಯಲ್ಲಿರು. ಆಚೆ ನಾಡಿದ್ದು ನಾನು ಮನೆಯಲ್ಲಿರುವೆ. ಅದಕ್ಕೇಕೆ ಕೊಸರಾಟ?"

ಸಕ್ಕೂ ಮಾತಿಗೆ ಸುಮ್ಮನಾದಳು ಮೀನಾ.

ಮಕ್ಕಳ ಆಸೆ–ಪ್ರತ್ಯಾಸೆಯನ್ನು ಕಣ್ತುಂಬ ಕಂಡು ನಸುನಕ್ಕಳು ಮೋಹಿನಿ.

ಉದ್ಯಮೇನ ಹಿ ಸಿಧ್ಯಂತಿ ಕಾರ್ಯಾಣಿ ನ ಮನೋರಥೈಃ ।

ಮನದಾಳದಲ್ಲಿ ಸೂಕ್ತಿಯೊಂದು ಮೊಳಗಿತು.

## ೧೭

ಇಂದು ಭಾನುವಾರ. ಕಮಲಾ ಒಳ ಹೆಜ್ಜೆಯಿಟ್ಟಾಗ ಹತ್ತು ಗಂಟೆಯ ಸಮಯ.

ಮೋಹಿನಿ ಅವಳನ್ನು ಬಲ್ಮೆಯಿಂದ ಸ್ವಾಗತಿಸುತ್ತ "ಹೇಗಿದ್ದೀ, ಕಮಲಾ?" ಎಂದಳು.

"ನೀನು ಹೇಗಿದ್ದೀ ಮೊದಲು ಹೇಳು....ಈಗ ನಿನ್ನ ಆಸೆ ಕೈಗೂಡಿತಲ್ಲ, ಏನೆನಿಸುತ್ತೆ ಮನಸ್ಸಿಗೆ ಹೇಳು?"

"ಶುರು ಮಾಡಿದ್ದು ಮನಸ್ಸಿಗೆ ಹಿತ. ಆದರೆ ನಾನೊಬ್ಬಳೇ ನಿಭಾಯಿಸಲಾರೆ. ಒಮ್ಮೊಮ್ಮೆ ಚಂದ್ರಿ ಬರುತ್ತಾಳೆ. ಸಹಾಯಕರನ್ನು ನೇಮಿಸಿಕೊಳ್ಳುವವರೆಗೆ ಕಷ್ಟವೇ."

"ಸ್ವಲ್ಪದಿನ ಮಾತ್ರ. ಅನಂತರ ತೊಂದರೆಯಿಲ್ಲ."

"ಬೇಕರಿಯ ಸಾಲ ಇದೆ. ಈ ಮಧ್ಯೆ ಗೋಪು ಬಂದರೆ ಯಾವ

ತಗಾದೆ ಏಳುತ್ತೋ....ಅಷ್ಟರೊಳಗಾಗಿ ನೀನೊಂದು ಮನೆ ಹುಡುಕಿಕೊಟ್ಟರೆ ಬಹಳ ದೊಡ್ಡ ಉಪಕಾರ. ಬೇಕರಿಯ ಸಾಲ ಪೂರೈಸುವವರೆಗೆ ನನಗೆ ನಿದ್ರೆಬರುವುದಿಲ್ಲ."

"ಅಷ್ಟೊಂದು ಹಚ್ಚಿಕೊಳ್ಳಬಾರದು ಬಿಡು."

"ನನ್ನ ಪ್ರವೃತ್ತಿಗೆ ಅದು ಹಿಡಿಸುವುದೇ ಇಲ್ಲ. ಈ ದಿನ ಮಧ್ಯಾಹ್ನವೂ ಹೋಗುವೆ. ಕ್ಲೀನಿಂಗ್ ವಹಿಸಿಕೊಂಡಿರುವೆ. ಆದಷ್ಟು ಬೇಗ ಸಾಲ ತೀರಿದರೆ ಸಾಕು."

"ಹೇಗೂ ತೀರುತ್ತೆ ಬಿಡು."

"ಕಮಲೂ, ನಿಮ್ಮಗಳಿಂದ ಅಲ್ಪಸ್ವಲ್ಪವನ್ನಾದರೂ ಕೇಳಿ ಸಾಲ ಪಡೆಯ ಬಹುದಾಗಿತ್ತು. ನನಗದು ಇಷ್ಟವೇ ಇಲ್ಲ. ಗೋಪು ಹೋಗಿ ಮೂರು ತಿಂಗಳಾಯ್ತು. ಎರಡು ತಿಂಗಳು ಅವನ ಹಣದಲ್ಲಿ ಅರ್ಧ ತೆಗೆದುಕೊಂಡಿದ್ದೆ. ಅನಂತರ ತೆಗೆದುಕೊಳ್ಳಲಿಲ್ಲ. ಕೊರಳಲ್ಲಿದ್ದ ಮಾಂಗಲ್ಯ ಮತ್ತು ಗುಂಡುಗಳನ್ನು ಮಾರಿ ಜೀವನ ನಡೆಸಿದೆ!"

"ನಿಜವಾಗಿ....?"

"ಹೌದು. ಏಕೆ ಆಶ್ಚರ್ಯ? ಮಾರಕೂಡದೇ?"

"ಮಾಂಗಲ್ಯ ಮಾರುವುದುಂಟೇ?"

"ಇದು ಅರ್ಥಹೀನ ವ್ಯವಹಾರ. ಹೆಣ್ತನಕ್ಕೆ ಮಂಕುಬೂದಿ ಎರಚುವ ಮೋಡಿ! ಶಾಸ್ತ್ರ ಪವಿತ್ರ-ಮಂಗಳ ದ್ರವ್ಯ ಎಂದು ಮುಂತಾಗಿ ದೊಡ್ಡ ಹೆಸರಿಟ್ಟು ಶಾಸ್ತ್ರಗಳ ಸಂಕೋಲೆ ತೊಡಿಸಿ ಹೆಣ್ಣನ್ನು ಭದ್ರಕೋಟೆಯೊಳಗೆ ಕೂಡಿಸುವ ಕ್ರಮಕ್ಕಾಗಿ ಹೂಡಿದ ಸಂಚು. ಈ ಶಾಸ್ತ್ರಸಂಕೋಲೆ ಕಿತ್ತೊಗೆಯದ ಹೊರತು ನಮ್ಮ ಜೀವನಕ್ಕೆ ಏನೇನೂ ಸುಖವಿಲ್ಲ. ಹೆಣ್ಣು ಯಾವ ಮಂಗಳ ದ್ರವ್ಯವನ್ನೂ ಮುಟ್ಟದಿದ್ದರೆ ಅಥವಾ ಉಪಯೋಗಿಸದಿದ್ದರೆ ಆಗುವ ಅನರ್ಥವೇನು? ಇದು ಕೇವಲ ನಂಬಿಕೆಯೇ ವಿನಾ ಮತ್ತೇನೂ ಅಲ್ಲ. ಪರಂಪರಾನುಗತವಾಗಿ ಬಂದ ಮೂಢನಂಬಿಕೆ. ಇಂಥ ಮೂಢ ನಂಬಿಕೆಯಿಂದಲೇ ನಮ್ಮ ಸ್ವಾತಂತ್ರ್ಯ ಹರಣ. ಸರ್ವಶಕ್ತಿ ಹರಣ. ನಾವು ಎಚ್ಚತ್ತು ಆತ್ಮನಿಷ್ಠೆ-ವ್ಯಕ್ತಿನಿಷ್ಠೆಯನ್ನು ಕಾಪಾಡಿಕೊಳ್ಳದಿದ್ದರೆ ಎಂದೆಂದಿಗೂ ಹೀಗೆಯೇ. ಗೋಪು ಸತ್ತ ವರದಿಯೇನೂ ಬಂದಿಲ್ಲ. ಆದರೂ ನನ್ನ ಕೈಯಿಂದಲೇ ನನ್ನ ಸಿಂಧೂರವನ್ನು ಅಳಿಸಿಕೊಂಡೆ! ಒಂದು ವೇಳೆ ಬೇಕೆನಿಸಿದರೆ ಧರಿಸುವೆ. ಕೇವಲ ಅಲಂಕಾರಕ್ಕಾಗಿ; ಶಾಸ್ತ್ರಕ್ಕಾಗಿ ಅಲ್ಲ!"

"ಹಾಗಾದರೆ....?"

"ಇದರಲ್ಲಿ ಸಂಶಯುವಿಲ್ಲ; ಶಂಕೆಯೂ ಇಲ್ಲ." ದೃಢ ಭಾವದಿಂದ ತಲೆಯಾಡಿಸಿದಳು ಮೋಹಿನಿ.

ಆ ಮಾತಿಗೆ ಬೆಚ್ಚಿದವಳಂತೆ ಸ್ತಂಭೀಭೂತಳಾದಳು ಕಮಲಾ.

ಮೋಹಿನಿ ತನ್ನದೇ ಆದ ಧಾಟಿಯಲ್ಲಿ ಮಾತನಾಡತೊಡಗಿದಳು. "ಕೇಳು ಕಮಲೂ! ಭಾರತೀಯ ಸಂಸ್ಕೃತಿಯು ಪರಂಪರಾನುಗತವಾದುದು. ಪುರಾತನವಾದುದರ ಸಾರಾಸಾರವನ್ನು ಪ್ರಸ್ತುತ ಸಂಸ್ಕರಿಸಲೇಬೇಕು....ನಾವು ವಿದ್ಯಾವಂತರು, ಆಲೋಚನಾಶಕ್ತರು ವಿಚಾರ ಪರಿಶೀಲನೆ ಮಾಡದೇ ಹೋದರೆ ಮತ್ತಾರು ಮಾಡುವರು ಹೇಳು? ಮೊನ್ನೆ ಮೊನ್ನೆ ನಮ್ಮ ಕೇರಿಯ ಹೆಣ್ಣುಮಗಳೊಬ್ಬಳು ಗಂಡನನ್ನು ಬಿಟ್ಟು ಹೊರಟೇ ಹೋದಳು. ಕಾರಣ ಆತ ಕುಡುಕ–ದುಷ್ಟಬುದ್ಧಿಯ ಧೂರ್ತ. ಅವಳನ್ನು ನಾನಾ ಪರಿ ಹಿಂಸಿಸುತ್ತಿದ್ದ. ಅವಳು ತಾಳಲಾರದೇ ಮನೆಬಿಟ್ಟಳು..... ಆಕೆ ಇನ್ನಾರನ್ನೋ ಕಟ್ಟಿಕೊಂಡು ಹೋದಳೆಂದು ಗುಲ್ಲು. ಹೋಗಿದ್ದರೆ ಹೋಗಲಿ. ಇವನಿಗಿಂತ ಅವನು ಚೆನ್ನಾಗಿ ನೋಡಿಕೊಳ್ಳುವವನಿದ್ದರೆ ಯಾಕಾಗಬಾರದು....? ಇಲ್ಲಿ ಕೇಳು ಕಮಲೂ! ಇಂದು, ಈ ಇಪ್ಪತ್ತನೆಯ ಶತಮಾನ ಸಂಜೆಯಲ್ಲಿ ಹಿಂದೂಸ್ಥಾನದಾದ್ಯಂತ ನಡೆಯುತ್ತಿರುವ ಸ್ತ್ರೀ ದಮನ ಹಿಂಸಾಚಾರ ನೀನು ತೀರಾಸಾಮಾನ್ಯವೆಂದು ಪರಿಗಣಿಸಲಾರೆ ನನಗೆ ಗೊತ್ತು. ಇದಕ್ಕೆ 'ಪರಿಹಾರ' ಏನೆಂಬುದನ್ನು ನೀನೇ ಸ್ವಲ್ಪ ಯೋಚಿಸು. ನಮ್ಮ ಸ್ವಂತಿಕೆಯನ್ನು ಬಿಟ್ಟುಕೊಟ್ಟು ನಾವು ನಾಲ್ಕು ಗೋಡೆಯೊಳಗಿನ ಜೀವನ ಬಂಧಿಯಾಗಿರುವುದರಿಂದಲ್ಲವೇ ನಮ್ಮ ಹಿಂಸೆಯ ಪರಾಕಾಷ್ಠೆ? ವೈಯುಕ್ತಿಕ ಆರ್ಥಿಕ ಸ್ವಾತಂತ್ರ್ಯ ಪಡೆದವರು ಸುಖವಾಗಿದ್ದಾರೆ. ಅದು ಕೇವಲ ನೂರಕ್ಕೋ ಸಾವಿರಕ್ಕೋ ಒಬ್ಬಿಬ್ಬರಿಗೆ ಮಾತ್ರ ಲಭ್ಯ. ಅದರಿಂದ ದೇಶಕ್ಕೇನು ಲಾಭ? ನಾವು ಶಾಸ್ತ್ರಗಳ ಸಂಕೋಲೆಯಿಂದ ಬಿಡುಗಡೆ ಹೊಂದಿ, ಗೃಹಬಂಧನದಿಂದ ಹೊರಬಿದ್ದರೆ– ಅಂದರೆ ಬರೀ ಬೀದಿ ಅಲೆಯುವುದು ಎಂದರ್ಥವಲ್ಲ ಸಾಮಾಜಿಕ ಸೇವೆ ಅಥವಾ ಜ್ಞಾನಾರ್ಜನೆ ಅಥವಾ ಆರ್ಥಿಕ ಸಂಪಾದನೆ ಅಥವಾ ಪಾರಮಾರ್ಥಿಕ ಚಿಂತನೆ ಯಾವುದೇ ಸಾಧನೆಗಳಲ್ಲಿ ಮುಂಬರಿಯಬಲ್ಲರಾದರೆ....ಏಕೆ ಅಡ್ಡಿ ? ಈ ಅಡ್ಡಿ ಆತಂಕ ಮುಖ್ಯವಾಗಿ ಸಾಮಾನ್ಯ ಜನರಲ್ಲೇ ಹೆಚ್ಚು. ಆರ್ಥಿಕ ಸ್ವಾತಂತ್ರ್ಯ ವೈಯಕ್ತಿಕ ಸ್ವಾತಂತ್ರ್ಯಗಳಿಲ್ಲದೆ ಗಂಡಿನ ಅಡಿಯಾಳಾಗಿ ಗೃಹಕೃತ್ಯ ನೆರವೇರಿಸಿದ ಮಾತ್ರಕ್ಕೆ ಹೆಣ್ಣಿನ ಜನ್ಮ ಪುನೀತವಾಗುತ್ತದೆಯೇ? ಹೇಳು! ನಮ್ಮ ನಮ್ಮ ಆತ್ಮೋದ್ಧಾರಕ್ಕೆ ನಾವು ಮಾಡಬೇಕಾದುದೇನು? 'ಪತಿಯೇ ಪರದೈವ' ಎಂದು ಗಿಣಿ ಬೋಧೆ ಮಾಡಿದ ಸಮಾಜ ಇಂದು ಕಣ್ಣಿದ್ದೂ ಕುರುಡು....ಕಿವಿಯಿದ್ದೂ

ಕಿವುಡು. ಹೆಣ್ಣಿನ ದುರಂತ ಜೀವನಕ್ಕಾಗಿ ಮರುಗುವವರು ಯಾರಿದ್ದಾರೆ? ಕೋಟ್ಯಾನುಕೋಟಿ ಸ್ತ್ರೀಜನರ ಸೇವೆಗೆ ಎಲ್ಲೋ ಒಂದು ಅಭಯಾಶ್ರಮ ಇನ್ನೆಲ್ಲೋ ಒಂದು ಅನಾಥಾಶ್ರಮ ಇದ್ದರೆ ಅದರಿಂದೇನಾದೀತು? ವಿದ್ಯಾ ದಾರಿದ್ರ್ಯ.... ಆರ್ಥಿಕ ದಾರಿದ್ರ್ಯ.... ದಯಾದಾರಿದ್ರ್ಯ.... ಕಾರುಣ್ಯ ದಾರಿದ್ರ್ಯ....ಸ್ವಾತಂತ್ರ್ಯ ದಾರಿದ್ರ್ಯ ....ಜ್ಞಾನದಾರಿದ್ರ್ಯ....ಒಂದೇ ಎರಡೇ ! ಹತ್ತು ಹಲವು ದಾರಿದ್ರ್ಯಗಳಿಂದ ನರಳುತ್ತ ಕೊಚ್ಚೆಯಲ್ಲಿ ಮಿಜಿಮಿಜಿ ಎನ್ನುವ ಹುಳುಗಳಂತೆ ದರಿದ್ರ ಬಾಳಿನಲ್ಲಿ ನರಳಿ ಬೆಂದುಹೋಗುವ ಈ ಜನ್ಮ ಎಂದಾದರೂ ಪುನೀತವಾಗುವುದುಂಟೇ?

ದೂರ ಗಮ್ಯಸ್ಥಾನ ಎಲ್ಲಿದೆ? ಯಾವ ದಿಕ್ಕಿನಲ್ಲಿದೆ ಎಂಬುದನ್ನು ಅರಿತವರಾರು? ಅಥವಾ ಅರಿತುಕೊಳ್ಳಲು ಪ್ರಯತ್ನವೂ ಇಲ್ಲವಲ್ಲಾ! ಕಮಲೂ! ನನ್ನ ವಿಷಾದವಾಣಿಯ ವಿಚಾರಧಾರೆ ನಿನ್ನ ಮನಸ್ಸಿಗೆ ಚಿಟ್ಟು ಹಿಡಿಸಿದ್ದರೆ ದಯವಿಟ್ಟು ಕ್ಷಮಿಸು; ಇಲ್ಲವೇ ಅಂತಃಚಕ್ಷುಗಳನ್ನು ತೆರೆಸಿದ್ದರೆ ವಿಚಾರ ಮಾಡು....ಏನು ಹೇಳುತ್ತಿ ಕಮಲಾ?

"ಒಪ್ಪಿದೆ, ಮೋಹಿನಿ! ನಿನ್ನ ಒಂದೊಂದು ಅಕ್ಷರವೂ ವಿಚಾರಪೂರಿತ ಹಾಗು ತುಲನಾತ್ಮಕ. ಜೀವನಯಜ್ಞದಲ್ಲಿ....ಯೌವನ ಎಂಬುದು ಎಲ್ಲರಲ್ಲೂ ಇರುತ್ತದೆ. ಅದರ ತೀಕ್ಷ್ಣಾತಿತೀಕ್ಷ್ಣ ಸೆಳೆತಕ್ಕೆ ಸಿಕ್ಕಿ ಬಟ್ಟೆಗೆಟ್ಟರೆ ಅದರ ದುಷ್ಪರಿಣಾಮ ಹೆಣ್ಣಿಗೇ ಹೊರತು ಗಂಡಿಗಲ್ಲ. ಅಂದಮೇಲೆ ಹೆಣ್ಣಿನ ಗತಿಯೇನು? ಯಾರು ಸಾಂತ್ವನ ನೀಡುವರು? ಸಾಂತ್ವನದ ಕತೆ ಒತ್ತಟ್ಟಿಗಿರಲಿ 'ಅಡಿಬಿದ್ದಾಗ ತಲಾಕ್ಕೊಂದು ಕಲ್ಲು ಒಗೆಯುತ್ತಾರೆ' ಎಂಬುದು ಸತ್ಯಸ್ಯಸತ್ಯ. ನಮ್ಮಲ್ಲಿ ಇನ್ನೂ ಸಾಮಾಜಿಕ ಸುಧಾರಣೆ ಆಗಿಲ್ಲವಾದ್ದರಿಂದ ಇಂದಿನ ಧೋರಣೆಗೆ ಪ್ರಾಶಸ್ತ್ಯ....ಇಷ್ಟಕ್ಕೆಲ್ಲಾ ಮತಿ ಮೌಢ್ಯ ಮುಖ್ಯ ಕಾರಣ. ನಮ್ಮಲ್ಲಿ ಕಲಿಯದವರ ಕತೆ ಒತ್ತಟ್ಟಿಗಿರಲಿ, ಕಲಿತವರೂ ಮತಿ ಮೌಢ್ಯದ ಪರಾಕಾಷ್ಠೆಯಿಂದ ಹೊರತಾಗಿಲ್ಲ. ಇದಕ್ಕೇನು ಮದ್ದು? ಕಲಿತವರ ದೃಷ್ಟಿಯಲ್ಲೂ ಹೆಣ್ಣು ತಮ್ಮ ಸೊತ್ತು. ಎಂದಿಗೂ ಆಕೆ ಅಂಗೈಲಾಡುವ ಗಿಣಿಯಾಗಿದ್ದರೇನೇ ಚೆನ್ನು....ಮೋಹಿನಿ ! ಇದನ್ನೆಲ್ಲಾ ಬ್ರಹ್ಮ ಬಂದರೂ ಸರಿಪಡಿಸಲಾರನೇನೋ ಎಂಬಷ್ಟು ಜಟಿಲತೆ. ಹೋಗಲಿ, ಬಿಡು. ನಾವು ಮಾತಾಡಿ ಏನು ಪ್ರಯೋಜನ? ಈಗೀಗ ಇಂಥ ವಿಚಾರಗಳನ್ನು ಚರ್ಚಿಸುವುದಕ್ಕೆ ಸಮಯವೂ ಇಲ್ಲ, ಸಹನೆಯೂ ಇಲ್ಲ ಎನಿಸುತ್ತದೆ. ಹೇಳುವ ಅಥವಾ ಕೇಳುವ ಬಾಧ್ಯತೆಯಿಂದ ತಪ್ಪಿಸಿಕೊಂಡು ಒಳ ಗುಡಾರದಲ್ಲಿ ಕುಳಿತಿರುವುದೇ ಲೇಸು.... ಅಂದರೆ ನಮ್ಮ ಕಂಠಶೋಷಣೆ ವ್ಯರ್ಥವೇ ಎಂದರ್ಥ."

"ಏನೇ ಇದ್ದರೂ ನಮ್ಮ ಕಾಲದಲ್ಲಂತೂ ಸುಧಾರಣೆಯ ಮಾತು ಕನಸಿನಗಂಟು !"

"ನಿಜ ಕಮಲಾ! ಆದರೂ...." ಏನೋ ಹೇಳಲು ಪ್ರಯತ್ನಿಸಿ ಸುಮ್ಮನಾದಳು ಮೋಹಿನಿ. ಹೃದಯ ಬಿಸಿಲಟ್ಟಿದ ಮಂಜಿನಂತಾಗಿತ್ತು.

## ೧೮

ರಘುನಾಥನ ಮನೆಯಲ್ಲಿ ಮದುವೆಯ ಸಂಭ್ರಮವೇ ಸಂಭ್ರಮ.

ಸರಸಿ ಅಡಿಯಿಂದ ಮುಡಿಯವರೆಗೆ ಜಗಜಗಿಸುತ್ತ ವಜ್ರಾಭರಣಗಳ ತೋರುಗೊಂಬೆಯಾಗಿ ಎಲ್ಲರ ಕಣ್ಮನಗಳನ್ನು ಸೆಳೆಯುತ್ತಿದ್ದರೆ, ಹೆಣ್ಣು ತಾಯಿಯೋ ಮಗಳೋ ಎಂದು ಅಚ್ಚರಿಪಡುವಂತಹ ವಿಚಿತ್ರ ಚಿತ್ತಾರ. ಔರಸ ಪುತ್ರಿ ನಿರ್ಮಲ ಹಸೆಮಣೆಯ ಹೆಣ್ಣು ಶ್ರೀಮಂತ ಆಚರಣೆ ಶ್ರೀಮಂತಿಕೆಗನುಗುಣ ರೀತಿಯ ಮೆರುಗು.

ರಘು ಮಡದಿಯನ್ನು ಕುರಿತು "ಮೋಹಿನಿಯನ್ನು ಕರೆತಂದಿದ್ದರೆ ಚೆನ್ನಾಗಿತ್ತು. ಒಬ್ಬಳೇ ತಂಗಿ. ಆದರಲ್ಲೂ ಬಡತನ. ಗಂಡ ಕಾಣೆಯಾಗಿ ಸಂಕಷ್ಟದಲ್ಲಿದ್ದಾಳೆ. ಅವಳನ್ನು ಕರೆತಂದು ಸೀರೆ ಕೊಟ್ಟರೆ ಒಳ್ಳೆಯದಿತ್ತು. ಪಾಪ, ಅನಾಥ ಮಕ್ಕಳು! ನೋಡುವವರು ದಿಕ್ಕಿಲ್ಲ. ಹೀಗಾಗಬಾರದಿತ್ತು" ಎಂದ, ದನಿಯಲ್ಲಿ ಕಳಕಳಿಯಿತ್ತು.

"ಅವಳೀಗ ಬಾಲವಾಡಿ ನಡೆಸುತ್ತಿದ್ದಾಳಂತೆ ! ಅನ್ನ ಬಟ್ಟೆಗೆ ಇನ್ನೇನು ಕೊರತೆ?"

"ಇರಲಿ, ಆದರಿಂದ ಒಡಲಿಗಿಷ್ಟು ಅನ್ನ ದೊರೆಯುತ್ತೆ. ಮತ್ತೇನು ಸಾಧ್ಯ? ಪಾಪ, ಶಶಿಯನ್ನು ಕಳಿಸಿ ಕರೆಸು."

"ಅಯ್ಯೊ, ಬೇಡಾರೀ! ಹಾಳು ಮೂಳು ಇಲ್ಲೇಕೆ? ಶಶಿಗೆ ನಾನು ಹೇಳಿದರೂ ಹೋಗಲಾರ. ನೀವು ಸುಮ್ಮನೆ ಪಾಪ ಎಂದು ಕೊರಗುತ್ತೀರಿ! ಯಾರಿಗೆ ಪಾಪ ಎಂದು ಮರುಗಬೇಕೋ ಅವರಿಗೆ ಮರುಗೋಣ. ಇವಳಿಗೇಕೆ? ಇಲ್ಲಿಗೆ ಬಂದಳು ಎಂದರೆ ನಮಗೇ ಅವಮಾನ....ಥೂ! ಥೂ! ನಾನಂತೂ ಮುಖ ನೋಡಲಾರೆ."

ರಘು ಬಹಳಷ್ಟು ಯೋಚಿಸಿ ಸುಮ್ಮನಾದ. ಪ್ರಯತ್ನಿಸಿದರೂ ತುಟಿಗಳು ಬಿರಿಯಲಿಲ್ಲ.

ಮನಸ್ಸು ಗತ ಕಾಲಕ್ಕೆ ಜಗಿಯಿತು. ಬಾಲ್ಯದ ದಿನಗಳಲ್ಲಿ ಹಿರಿಯ ತಂಗಿ ಶಾರದಾ ತೀರಿಕೊಂಡಾಗ ಮೋಹಿನಿಯ ಗೋಳು ಭಗವಂತನಿಗೇ ಪ್ರೀತಿ.... ಹುಡುಗಿಯಲ್ಲಿ ಯಾವ ಲೋಪದೋಷವೂ ಇರಲಿಲ್ಲ. ಆಗ ಎಷ್ಟೊಂದು ಸ್ನೇಹಸಂಪತ್ತಿ! ಈ ಮನೆಯಲ್ಲಿ ಇರುವತನಕವೂ ನಮ್ಮ ಮಕ್ಕಳನ್ನು ನೋಡಿ ಕೊಂಡವಳು ಅವಳೇ! ಅಂಥ ಉಪಕಾರ ಮರೆತು, ಅವಳ ಸಮಾಧಿ ಮಾಡಿದವಳು ಸರಸಿ. ಒಂದು ವೇಳೆ ವಸಂತ್ ಬಂದು ಅವಳನ್ನು ಮದುವೆ ಯಾಗಿದಿದ್ದರೆ ಅಥವಾ ಇನ್ನಾರಾದರೂ ಒಳ್ಳೆಯ ವರನಿಗೆ ಕೊಟ್ಟದ್ದಿದ್ದರೆ ಸುಖ ವಾಗಿರುತ್ತಿದ್ದಳು. ಪಾಪ! ಅನ್ಯಾಯವಾಗಿ ಜೀವನಕ್ಕೆ ಧಕ್ಕೆ! ನನ್ನ ಕಣ್ಮನಗಳಿಗೆ ಯಾವ ಮಂಪರ ಕವಿದಿತ್ತೋ, ನಾನೂ ಒಪ್ಪಿ ಅವಳ ಜೀವನಕ್ಕೆ ಕಲ್ಲು ಹಾಕಿದೆ. ಅಮ್ಮ ಸತ್ತ ನಂತರ ಅವಳಿಗೂ ಅತ್ತಿಗೆಯ ಕಾಟ ಸಹಿಸುವುದು ಬೇಡವಾಗಿತ್ತು. ಸಂದಿಗ್ಧ ಪರಿಸ್ಥಿತಿಗೆ ಸಿಕ್ಕಿ ಒಪ್ಪಿಕೊಂಡಳು, ಒಟ್ಟಿನಲ್ಲಿ ಎಲ್ಲಾ ರೀತಿಯಿಂದಲೂ ಕಲ್ಲು ಬಿತ್ತು. ಆಗಣ ನಮ್ಮ ಬಡತನ....ಆಗಣ ಜೀವನ ಪರಿಸ್ಥಿತಿ....ತಾಳಲಯ ಬದ್ಧ, ಅಂದಿಗೇ ಬಾಂಧವ್ಯ ಕಡಿದುಕೊಂಡ ನಾನು ಈಗ ಮುಖ ತೋರಿಸಲೂ ಆರೆ.... ಬಾಯೆಂದು ಕರೆಯಲೂ ಆರೆ....ದೈವೇಚ್ಛೆ ಇದ್ದಂತಾಗಲಿ....ರಘು ಅಲ್ಲಲ್ಲೇ ಅಡ್ಡಾಡಿದ. ಮಾನಸಿಕ ತುಮುಲದಿಂದ ಬೌದ್ಧಿಕಸ್ತರ ವಿಚಾರಹೀನವಾಯಿತು. ಸಿಗಾರು ಹಚ್ಚಿ ಕುಳಿತ. ಸ್ವಲ್ಪ ಹೊತ್ತು ನಿಶ್ಶಬ್ದ ಗತಿಯಲ್ಲಿ ಉರುಳಿ ಹೋಯಿತು. ತನ್ನ ವ್ಯಾಪಾರೀ ಗೆಳೆಯ ಸಣ್ಣಗೆ ಶಿಳ್ಳೆ ಹಾಕುತ್ತ ಟಕ್ಕ ಟಕ್ಕ ಒಳಬಂದ.

"ಮಂಜೂ ಬಾರಯ್ಯ, ನೀನು ಒಂದು ವಾರದಿಂದ ಕಾಣಲಿಲ್ಲ?"

"ಕಲ್ಕತ್ತಕ್ಕೆ ಹೋಗಿದ್ದೆ. ಹೊರಡುವ ಮುನ್ನ ನಿನಗೆ ಹೇಳು ಯೋಚನೆಯಿತ್ತು. ಆದಕ್ಕೂ ಸಮಯ ದೊರೆಯಲಿಲ್ಲ."

"ಈ ಸಲ ಎಲ್ಲಾ ಸಾಮಗ್ರಿಗಳ ಬೆಲೆಗಳು ಉಚ್ಛ್ರಾಯ ಗತಿಯಲ್ಲಿವೆ."

"ಹೌದು....ಎರಡು ಪಟ್ಟು ಲಾಭ ವ್ಯಾಪಾರಸ್ತರಿಗೆ?" ಚುಟುಕಿ ಹಾಕಿದ ಮಂಜು ಬೆರಳು ಮಿಡಿದು.

"ಮುಂದಿನ ತಿಂಗಳು ಹೀಗೇ ಇರುತ್ತೆ ಎಂದು ನಂಬುವುದು ಕಷ್ಟ...."

"ಹಾಗೆನ್ನಬೇಡ. ಮುಂಗಾರು ಮಳೆಯ ಹಿನ್ನಡೆ ಬೆಲೆ ಏರಿಕೆಗೆ ಸಾಕ್ಷಿ!"

"ನಮ್ಮಲ್ಲಿ ವರ್ಷವರ್ಷವೂ ಇದೇ ಪಾಡು."

"ಈ ಸಲ ಅಂತಹ ಕಷ್ಟವೇನಿಲ್ಲ ಬಿಡು. ಮುಂಗಾರಿನ ಹಿನ್ನಡೆ

ವ್ಯಾಪಾರಸ್ಥರಿಗೆ ವರ!"

ಇಬ್ಬರೂ ನಕ್ಕುಬಿಟ್ಟರು.

"ನಿನ್ನ 'ರಘು ಎಂಟರ್‌ಪ್ರೈಸಸ್' ತುಂಬಾ ಚೆನ್ನಾಗಿ ನಡೆಯುತ್ತಿದೆ. ನೀನು ತುಂಬ ಅದೃಷ್ಟವಂತ. ತಂದೆಹೋದದ್ದೂ ನಿನಗೆ ಒಂದು ವರವೇ!"

ಪುನಃ ಇಬ್ಬರೂ ನಕ್ಕುಬಿಟ್ಟರು; ದನಿ ಮಾಡು ಮುಟ್ಟುವಂತೆ ಮೊಳಗಿತು.

"ನೀನು ಹೇಳುವುದು ಸತ್ಯವೇ. ತಂದೆ ಇರುವಾಗ ವ್ಯಾಪಾರ ಅಷ್ಟಕ್ಕಷ್ಟೆ. ಹೊಟ್ಟಬಟ್ಟೆಗೆ ಆಗುತಿತ್ತು ಅಷ್ಟೆ. ಅನಂತರ ನನ್ನ ಸ್ವಂತ ಪರಿಶ್ರಮದಿಂದ ವ್ಯಾಪಾರವನ್ನು ಊರ್ಜಿತಗೊಳಿಸಿದೆ. ಈಗಲೂ ಸಹ ದಿನಕ್ಕೆ ಎಂಟ್ಹತ್ತು ಗಂಟೆಗಳ ಕಾಲ ಕೆಲಸ ಮಾಡುವೆ. ನನ್ನ ಮಕ್ಕಳಾದ ಶಶಿ–ಅಶೋಕರಿಗೆ ಅಷ್ಟೇನೂ ವ್ಯಾಪಾರ ಚಾಣಾಕ್ಷತೆ ಇದ್ದಂತಿಲ್ಲ. ಮುಂದೆ ನೋಡಬೇಕು ಹೇಗಾಗುತ್ತಾರೆ ಎಂದು. ಒಂದು ವೇಳೆ ಅವರಿಬ್ಬರೂ ಬುದ್ಧಿ ಕುದುರಿಸಿಕೊಳ್ಳದಿದ್ದರೆ ವ್ಯಾಪಾರಕ್ಕೆ ಧಕ್ಕೆ. ನನಗೆ ಅದೊಂದು ಚಿಂತೆಯೂ ಉಂಟು."

"ಈಗಲಿಂದಲೇ ಯಾರನ್ನಾದರೂ ಅಂಗಡಿಗೆ ಹಾಕಿಕೊಂಡು ತರಬಿಯತ್ತು ಮಾಡು."

"ಮಾತು ಕೇಳಬೇಕಲ್ಲ....?"

"ಕೇಳುವಂತೆ ಪಳಗಿಸಬೇಕು."

"ಕಷ್ಟವೇ....ಅವರಾಗಿಯೇ ದಾರಿಗೆ ಬಂದ ಹೊರತು ಸಾಧ್ಯವಿಲ್ಲ. ಓದುವುದೂ ಅಷ್ಟಕ್ಕಷ್ಟೆ. ಸರಿದಾರಿಗೆ ಬರದಿದ್ದ ಪಕ್ಷದಲ್ಲಿ ಅವರ ಪಾಲು ಕೊಟ್ಟು ಏನಾದರೂ ಮಾಡಿಕೊಳ್ಳಿ ಎಂದುಬಿಡುವೆ."

"ಅದು ಒಳ್ಳೆಯದೇ."

"ಮಂಜೂ, ಇಲ್ಲಿ ಕೇಳು. ನನ್ನ ಬಾಳಿನಲ್ಲಿ ನ್ಯಾಯಾನ್ಯಾಯಗಳು ಒಂದೇ ನಿಟ್ಟಿನಲ್ಲಿ ನಡೆದುಹೋಗಿವೆ. ಅಪ್ಪ–ಅಮ್ಮ, ಇಬ್ಬರು ತಂಗಿಯರು ಯಾವ ಸುಖವನ್ನೂ ಕಾಣದೆ ಮಣ್ಣು ಮುಕ್ಕಿದರು. ಇದ್ದ ಒಬ್ಬ ತಂಗಿ ಗಂಡಾಂತರದಲ್ಲಿದ್ದಾಳೆ. ನಮಗೆಷ್ಟು ಸ್ವಾಭಿಮಾನವೋ ಆಕೆಗೂ ಅಷ್ಟೇ ಸ್ವಾಭಿಮಾನ. ಒಂದಿನ ಈ ಹಾದಿ ತುಳಿಯಲಿಲ್ಲ. ಬಾಂಧವ್ಯದ ಹಾದಿಗೆ ಮುಳ್ಳು ನೆಟ್ಟಾಗಿದೆ....ನನ್ನ ಮಕ್ಕಳು ಮಾತು ಕೇಳುವವರಲ್ಲ....ಅವರ ರೀತಿ ನೀತಿ ಎಲ್ಲಕ್ಕೂ ವಿರೋಧ. ಅತೀ ದುಂದು ವೆಚ್ಚ...ಅನೀತಿ ಅನಾಚಾರಗಳಲ್ಲಿ ನಿಸ್ಸೀಮರು....ಹೆಣ್ಣು ಮಕ್ಕಳೂ ಅಷ್ಟೆ. ಏನೋ ಒಂದು ರೀತಿಯ ನಿರ್ಲಕ್ಷ್ಯ, ದುಮ್ಮಾನಗಳ ಪ್ರತೀಕ. ಪೆಣ್ತನದ ನಯವಿನಯ ಮುಂತಾದ ಯಾವ ಗುಣವೂ ಇಲ್ಲ. ಮುಂದೆ ಯಾವ ಮಾರ್ಗ

ಹಿಡಿಯುತ್ತಾರೋ ದೇವರಿಗೇ ಗೊತ್ತು ! ನಾನು ಗಳಿಸಿದ ಹಣ ದಿವಾಳಿ ಎಬ್ಬಿಸುವುದಕ್ಕೆ ಸಾಕು.....!" ವಿಷಾದವಾಣಿ ಎದೆಯಾಳದಿಂದ ಮೊಳಗಿತು.

"ಮತ್ತೆ ಮುಂದೇನು?"

"ನೋಡೋಣ, ಈಗ ಯರ್ರಾಬಿರ್ರಿಯಾದರೂ ಮುಂದೆ ಸರಿ ಹೋದಾರು ಎಂಬ ಒಂದು ಸಣ್ಣ ಆಶಾಕಿರಣವೂ ಇದೆ. ಆದರೂ ನನ್ನ ಡ್ಯೂಟಿ ನಾನು ಮಾಡಲೇಬೇಕಷ್ಟೆ ?"

"ಅದು ನಿಜ."

"ಅದಕ್ಕೇ ನಾನೀಗ...." ಮುಂದೆ ಮಾತು ಹೊರಡದೆ ಸುಮ್ಮನಾದ.

"ನನಗೆಲ್ಲ ಅರ್ಥವಾಯಿತು ಬಿಡು. ಅದಕ್ಕೇ ರೀತಿ ನೀತಿ ಬಿಟ್ಟುಕೊಟ್ಟು ಜೀವನದ ಎಲ್ಲಾ ಸುಖಭೋಗಗಳ ಲಾಭಪಡೆದುಕೊಳ್ಳುತ್ತಿದ್ದೀ ಅಲ್ಲವೇ?"

ಇಬ್ಬರೂ ನಕ್ಕುಬಿಟ್ಟರು.

"ಹೌದಪ್ಪಾ! ಐಹಿಕ ಸುಖಭೋಗ ಇದ್ದಾಗ ಹೊರತು ಸತ್ತಾಗ ಏನಿದ್ದೀತು?"

"ರಘು, ಮಗಳ ಮದುವೆ ಮುಗಿದ ನಂತರ ವಿದೇಶ ಪ್ರವಾಸ ಹೊರಡು. ನಾಲ್ಕು ಊರು ಸುತ್ತಾಡಿ ಬಂದರೆ ಹೊಸ ಅನುಭವ ಬರುತ್ತದೆ. ಯಾಕೆ ಹೋಗಬಾರದು?"

"ಆ ಯೋಚನೆಯೂ ಇದೆ. ಮೂರು ತಿಂಗಳಿಂದ ವೀಸಾಕ್ಕೆ ಪ್ರಯತ್ನಿಸುತ್ತಿರುವೆ. ಇನ್ನೂ ಸಿಕ್ಕಿಲ್ಲ."

"ಓ ಪರವಾಯಿಲ್ಲ! ನನಗೆ ಗೊತ್ತೇ ಇಲ್ಲವೇ?"

"ಮಂಜೂ! ವೀಸಾ ಸಿಕ್ಕುವುದು ಕಷ್ಟವಾಗಿದೆ. ಇದರಿಂದಲೇ ನಿನಗಿನ್ನೂ ಹೇಳಲಿಲ್ಲ."

"ಒಬ್ಬನೇ ಹೋಗುವೆಯೋ ಅಥವಾ ಇಬ್ಬರೂ ಹೋಗುವಿರೋ?"

"ಈ ಹಳಬರನ್ನು ಕರೆದುಕೊಂಡು ಹೋದರೆ ಸ್ವಾರಸ್ಯವಿರುವುದಿಲ್ಲ ಬಿಡು."

"ನಾನೂ ಹೋಗಬಾರದೇಕೆ ಎಂಬ ಯೋಚನೆಯಿದೆ. ಸಾಧ್ಯವಾದರೆ ಇಬ್ಬರೂ ಕೂಡಿಯೇ ಹೋಗೋಣ. ನಾನು ಹೊರಟಿರುವುದು ಒಬ್ಬನೇ!"

"ಒಳ್ಳೆಯದಾಯ್ತು!"

ಒಡನೆ ಮಿಂಚಿದ ನಗುವಿನ ಲಹರಿಯಲ್ಲಿ ಸಂತಸದ ಅಲೆ ಉಕ್ಕಿ ಹರಿಯಿತು.

## ೧೯

.... ಪೂರ್ವ ದಿಗಂತದ ಮಂಜು ವಾಹಿನಿಯ ಮೇಲೆ ಅರುಣೋದಯಶ್ರೀ.

.... ಅರುಣ ಕಾಂತಿಯ ನವುರಾದ ಸುಂದರ ಹರವು ಪೃಥ್ವಿಯ ಮೇಲೆ.

ಗೋಪು ಮರದಿಂದ ಕೆಳಗೆ ಬಿದ್ದಾಗ ಬಲಕಾಲಿನ ತೊಡೆಯ ಮೂಳೆ ಮುರಿದಿತ್ತು. ಬಿದ್ದೊಡನೆ ಭಯ ಭೀತಿಯ ವಿಭ್ರಮೆಯೋ, ನೋವಿನ ಮಂಪರವೋ ಮತ್ತಾವುದೋ ಮನವನ್ನು ಆವರಿಸಿ ಪ್ರಜ್ಞೆ ತಪ್ಪಿತು. ಎಷ್ಟೋ ಹೊತ್ತಿನಮೇಲೆ, ತಂಗಾಳಿ ತಣ್ಣಗೆ ತೀಡಿದಾಗ ಮೈಯರಿವು ಮೂಡಿ ಕಣ್ತೆರೆದ. ಮುರಿದ ಕಾಲಿನ ನೋವು ಅತೀ ಹಿಂಸ್ರಕ. ಇರುವೆಗಳು ಕ್ರಿಮಿಕೀಟಗಳು ಮುಖ ಮೈಗಳನ್ನು ಮುತ್ತುತ್ತಿವೆ. 'ನನ್ನ ಪ್ರಾಣ ಹೋಗುವ ಮುಂಚೆಯೇ ಈಗೋಳು' ಎಂದುಕೊಂಡು ಎದ್ದು ಕುಳಿತುಕೊಳ್ಳಲು ಪ್ರಯತ್ನಿಸಿದ. ಮೈಯೆಲ್ಲಾ ಅಗಾಧವಾದ ನೋವು. ಮುರಿದಕಾಲಿನ ನೋವು ಮತ್ತೂ ಅಗಾಧ. ಹೇಗೆ ಹೇಗೋ ಪ್ರಯತ್ನಪಟ್ಟು ಎದ್ದು ಕುಳಿತು ಬಹಳ ಕಷ್ಟದಿಂದ ಮುರಿದ ಕಾಲನ್ನು ನೀಡಿದ. ನಂತರ ಮೈಮೇಲೆ ಹತ್ತಿದ್ದ ಕ್ರಿಮಿಕೀಟಗಳನ್ನು ಜಾಡಿಸಿಕೊಂಡು ತಾನು ಬಿದ್ದಿರುವ ತಾವಿಗೂ ರಸ್ತೆಗೂ ಇರುವ ಅಂತರ ಗಮನಿಸಿದ. ಅದು ಅಂತಹ ದೂರವೇನಿಲ್ಲ. ಆದರೆ, ರಸ್ತೆ ಇರುವುದು ಎತ್ತರದಲ್ಲಿ ತಾನಲ್ಲಿಗೆ ಹೋಗುವುದೆಂದರೆ ಹಿಮ್ಮೊಗವಾಗಿ ತೆವಳುತ್ತ ಹೋಗಬೇಕು. ಅದು ಸಾಧ್ಯವೇ? ಏನು ಮಾಡಲಿ? ಎಂಬುದು ತನ್ನ ಮುಂದಿನ ಪ್ರಶ್ನೆ. ಹೇಗಾದರೂ ರಸ್ತೆಯನ್ನು ಸೇರದಿದ್ದರೆ ಇಲ್ಲಿ ಕಾಡು ಪ್ರಾಣಿಯ ಪಾಲಾಗುವುದು ಖಂಡಿತ....ಆ ಧೂರ್ತರು ಸಾಮಾನ್ಯ ಗುದ್ದಿದ್ದಾರೆಯೇ? ಮೈ ಮೂಳೆ ನಿಟಿ ನಿಟಿ ಎನ್ನುವಷ್ಟು ನಜ್ಜುಗುಜ್ಜಾಗಿದೆ. ಹೇಗೆ ರಸ್ತೆ ಸೇರುವೆನೋ ಎನ್ನುತ್ತ ಅತ್ತ. ರಾತ್ರಿಯ ಕಟು ಅನುಭವ ಹೃದಯವನ್ನು ಕಾಣದ ಕೈಗಳಿಂದ ಹಿಸುಕುತ್ತಿದೆ.

ಕಡ್ಡಿ, ಕಲ್ಲು, ಮುಳ್ಳುಗಳನ್ನು ಕೈಯಿಂದ ತಳ್ಳುತ್ತ ಹಿಮ್ಮೊಗವಾಗಿ ರಸ್ತೆಯ ಕಡೆಗೆ ತೆವಳತೊಡಗಿದ. ಹಿಂಸೆ–ತಾಳಲಾಗದ ಹಿಂಸೆಯಿಂದ ಕಾಲೆಳೆದುಕೊಳ್ಳುತ್ತ ರಸ್ತೆಯನ್ನು ಸೇರಬೇಕಾದರೆ ಅದೆಷ್ಟು ಹೊತ್ತು ಉರುಳಿತೋ....ಅಂತೂ ರಸ್ತೆಯಂಚನ್ನು ಸೇರಿ ಕಾಲು ನೀಡಿಕೊಂಡು ಮುಂಬೈ ಕಡೆ ಹೋಗುವ ವಾಹನಗಳಿಗಾಗಿ ಕಾದು ಕುಳಿತ. ಮುಂಬೈ ಕಡೆಯಿಂದ ಬೆಂಗಳೂರಿಗೆ ಹೊರಟ ಗಾಡಿಗಳೇ ಹೆಚ್ಚು. ಈ ಕಡೆಯಿಂದ ಆ ಕಡೆಗೆ ಹೊರಟ ಗಾಡಿಗಳು ಹಾದು ಹೋದರೂ ಭರ್ತಿಯಿದ್ದುದರಿಂದ ಬೇಡುವಂತಿಲ್ಲ. ಬಸ್ಸುಗಳು ಕಂಡಾಗಲೆಲ್ಲಾ ಕೈಚಾಚಿ

ಉಚ್ಛ ದನಿಯಲ್ಲಿ ಬೇಡಿಕೊಂಡ. ಕೆಲವು ಬಸ್ಸುಗಳು ನಿಲ್ಲದೆ ಹೊರಟು ಹೋದುವು. ಕಿಟಕಿಯ ಬಳಿ ಕುಳಿತವರು ಇಣಕಿ ನೋಡಿದರು ಕೂಡ. ಯಾರಿಗೂ ಇವನ ಸ್ಥಿತಿ ಅರ್ಥವಾಗಲಿಲ್ಲವೇನೋ....ಅಥವಾ ಇವನ ಅದೃಷ್ಟವೇ ಚೆನ್ನಾಗಿರಲಿಲ್ಲವೋ....

ಬಸ್ಸುಗಳು ಕಂಡಾಗಲೆಲ್ಲಾ ಹೋ ಎಂದು ಅಳುತ್ತ ಕೈಮುಗಿದು ಬೇಡಿ ಕೊಳ್ಳತೊಡಗಿದ. ಕೊನೆಗೊಂದು ಪ್ರವಾಸೀ ಬಸ್ಸು ನಿಂತಿತು. ಅದರಲ್ಲಿದ್ದವರು ಇಳಿದು ಬಂದು "ಏನಪ್ಪಾ" ಎಂದರು.

ಗೋಪು ಕೈ ಮುಗಿದುಕೊಂಡು ಗೋಳಾಡಿ ತನ್ನ ಕತೆಯನ್ನು ಹೇಳಿಕೊಂಡ. ಕದ್ದ ಹಣದ ಸೊಲ್ಲೆತ್ತದೆ "ನನ್ನ ಸರ್ವಸ್ವವನ್ನೂ ಲಾರಿಯವರು ಕಿತ್ತುಕೊಂಡರು. ರಾತ್ರಿ ಮರ ಹತ್ತಿ ಕುಳಿತು ನನ್ನ ಜೀವ ಉಳಿಸಿಕೊಂಡೆ. ರಾತ್ರಿಯಲ್ಲಿ ಯಾವುದೋ ಭೂತ ಕಾಡದಿದ್ದರೆ ನಾನು ಮರದಿಂದ ಬೀಳುತ್ತಿರಲಿಲ್ಲ. ಅನಾಹುತವಾಯಿತು. ದಯಮಾಡಿ ನನ್ನನ್ನು ಎತ್ತಿ ಬಸ್ಸಿನಲ್ಲಿ ಕರೆದೊಯ್ದು ಮುಂಬೈನಲ್ಲಿ ಆಸ್ಪತ್ರೆಗೆ ಸೇರಿಸಿ ಉಪಕಾರ ಮಾಡಿ" ಎಂದು ಜೋರಾಗಿ ಅಳುತ್ತ ಬೇಡಿಕೊಂಡ ಗೋಪು.

ಆಗ ಬಸ್ಸಿನವರು ಅವನನ್ನು ಎತ್ತಿ ಬಸ್ಸಿನಲ್ಲಿ ಮಲಗಿಸಿಕೊಂಡರು.

ಅವನ ಸ್ಥಿತಿಗತಿ ಮನವನ್ನು ಕರಗಿಸಿತು. "ನಿನ್ನೆಯಿಂದ ಕಾಡಿನಲ್ಲಿ ಬಿದ್ದಿದ್ದು ಹಿಮ್ಮೊಗವಾಗಿ ತೆವಳಿಕೊಂಡು ಬರಬೇಕಾದರೆ ಎಷ್ಟು ಕಷ್ಟಪಟ್ಟಿರಬೇಡ" ಎಂದೂ ಎಲ್ಲರೂ ಸಹಾನುಭೂತಿ ತೋರಿ ಮರ್ಮರ ಮರುಗುವವರೇ. ಅವನಿಗೆ ಬ್ರೆಡ್ಡು ಹಾಲು ಬಿಸ್ಕತ್ತುಗಳ ಕೈತುತ್ತುಗಳ ಉಪಚಾರವೂ ಆಯಿತು. ಅವನು ಉಪಕಾರಿಗಳಿಗೆಲ್ಲಾ ಕೈಮುಗಿದು ವಂದನೆ ಸಲ್ಲಿಸಿದ. ಸ್ವಲ್ಪದೂರ ಪಯಣ ಸಾಗಿತ್ತೇನೋ ಅವನಿಗೆ ವಿಪರೀತ ಚಳಿ ಬಂದು ಗಡಗಡನಡುಗ ಹತ್ತಿದ. ಹಲ್ಲು ಗಿಟಗರಿಸುವ ಚಳಿ-ಚಳಿಯ ನಡುಕದಿಂದ ಮುರಿದ ಕಾಲಿನ ಬಾಧೆ ತಡೆಯಲಾರದೆ ಹಾಹೂ ಎಂದು ನರಳುತ್ತ ಗೋಳಾಡಿದ. ಯಾರೋ ಶಾಲು ಮಪ್ಲರ್ ಕೊಟ್ಟರು. ಆದರೂ ತಡೆಯಲಾರ, ಅನುಭವಿಸಲಾರ. ಅರ್ಧ ಗಂಟೆಯೊಳಗಾಗಿ ಚಳಿ ಬಿಟ್ಟು ಜ್ವರ ಹತ್ತಿತು.

ಮರುದಿನ ಮಧ್ಯಾಹ್ನ ಮುಂಬೈ ಮುಟ್ಟುತ್ತದೆ ಬಸ್ಸು. ಆ ತನಕ ಆತನ ತುರ್ತು ಅಗತ್ಯಕ್ಕಾಗಿ ಮತ್ತು ಪ್ರಥಮ ಚಿಕಿತ್ಸೆಗಳಿಗಾಗಿ ಹಾದಿಯಲ್ಲಿನ ಆನಂದ ಪುರದ ಆಸ್ಪತ್ರೆಯಲ್ಲಿ ಬಸ್ಸು ನಿಂತಿತು. ಆಸ್ಪತ್ರೆಯ ಸಿಬ್ಬಂದಿ ಮತ್ತು ಡಾಕ್ಟರುಗಳು ಅವನಿಗೆ ಚಿಕಿತ್ಸೆ ಮಾಡಿ ಅದೇ ಬಸ್ಸಿನಲ್ಲಿ ಮುಂಬೈಗೆ ಕಳುಹಿಸಿದರು.

ಬೆಂಗಳೂರಿನ ಪೋಲೀಸರು ಅವನಿಗಾಗಿ ಬಸ್ ನಿಲ್ದಾಣದಲ್ಲಿ ಕಾಯುತ್ತಿದ್ದರು. ಬಸ್ಸು ನೇರವಾಗಿ ನಿಲ್ದಾಣಕ್ಕೆ ಬಾರದೆ ಆಸ್ಪತ್ರೆಗೆ ಹೋಗಿಬಂದುದು ತಿಳಿದು ಬಂತು. ಆಸ್ಪತ್ರೆಯಲ್ಲಿ ವಿಚಾರಿಸಿದರೆ ಆಪರೇಷನ್ ಥಿಯೇಟರಿನ ಬಾಗಲಲ್ಲಿ ಸ್ಟ್ರೆಚರ್ ಮೇಲೆ ಮಲಗಿದ್ದ ಗೋಪು ಕಂಡು ಬಂದ. ಅವನು ತನಗಾದ ಅಪಘಾತವನ್ನು ಗದ್ಗದವಾಣಿಯಲ್ಲಿ ತಿಳಿಸಿ ಕಂಬನಿ ಮಿಡಿದ.

ಅನಂತರ ಅವನ ಚಿಕಿತ್ಸೆ. ಕಾಲು ಜೋಡಿಸುವ ಮಹಾಕಾರ್ಯ ಒಂದೆರಡು ತಿಂಗಳ ತನಕ ವಿಸ್ತರಿಸಿತು. ಅಲ್ಲೊಬ್ಬ ಪೋಲೀಸಿನವನನ್ನು ಕಾವಲು ಹಾಕಿ ಉಳಿದವರು ಹಿಂದಿರುಗಿದರು.

* * *

ಜನ. ಜನ. ಜನ. ಜನಜಂಗುಳಿಯಿಂದ ತುಂಬಿಹೋದ ಬೃಹದ್ ನಗರಿ. ಗೊತ್ತುಗುರಿಯಿಲ್ಲದೆ–ಧ್ಯೇಯೋದ್ದೇಶಗಳಿಲ್ಲದೆ ಕ್ರಿಮಿ ಕೀಟಗಳಂತೆ ಬಾಳಿನಲ್ಲಿ ಸಂದುಹೋಗುವ ಅತೀವ ಜನರಾಶಿ. ಸ್ವತಂತ್ರ ಭಾರತದಲ್ಲಿ ನಿರ್ಭಾರವಾಗಿ ಉಸಿರಾಡುತ್ತ ದಶಕ ದಶಕಗಳು ಉರುಳಿ ಹೋಗುತಿದ್ದರೂ ಜೀವನ ಸಾರ್ಥಕತೆ–ಗಮ್ಯಸ್ಥಾನದ ಅರಿವು ಬೌದ್ಧಿಕಸ್ತರದೆಡೆಗೆ ಸುಳಿಯದಿರುವುದು ಆಶ್ಚರ್ಯ! ಪರಮಾಶ್ಚರ್ಯ!.....

ವಿಚಾರವಿಹಾರ ಮಾಡಿದಾಗ ಮನಸ್ಸಾಗರವೆಲ್ಲಾ ಅಲ್ಲೋಲಕಲ್ಲೋಲ... ನೂರೆಂಟು ಕಷ್ಟಕಾರ್ಪಣ್ಯಗಳನ್ನು ಕೊಟ್ಟಭಗವಂತ ಮನಃಬುದ್ಧಿಗಳನ್ನು ಕೊಡದಿದ್ದರೂ ಚೆನ್ನಾಗಿತ್ತು....! ನಿಟ್ಟುಸಿರೊಂದನ್ನು ಬಿಟ್ಟು ಮನೆಗೆಲಸದಲ್ಲಿ ಮನವಿಟ್ಟಳು ಮೋಹಿನಿ.

ತಲೆಬಾಗಿಲ ಕರೆ ಗಂಟೆ ಕರೆ ನೀಡಿತು.

ಕುಕ್ಕೂ. ಕುಕ್ಕೂ. ಕುಕ್ಕೂ. ಕುಕ್ಕೂ.

ಮೋಹಿನಿ ಕದ ತೆರೆದಳು. ಬಂದವಳು ಚಂದ್ರಿ. ಮುಖ ಬಿಂಬದಲ್ಲಿ ಅಂತಹ ಸಂತೋಷದ ಕಳೆ ಏನಿರಲಿಲ್ಲ. ಏನೋ ಒಂದು ರೀತಿಯ ವಿಷಾದ....ಇನ್ನೇನೋ ಒಂದು ರೀತಿಯ ಕಳವಳ....ಮತ್ತೇನೋ ಒಂದು ರೀತಿಯ ಆಸಡ್ಡೆ ತುಂಬಿದ ಮಾನಸಿಕ ತುಮುಲದಿಂದ ನುಡಿದಳು,

"ಮುಂಬೈನಲ್ಲಿ ಗೋಪು ಸಿಕ್ಕಿದನಂತೆ...."

"ಹೌದೇ?"

"ಅವನು ಕದ್ದ ಹಣವನ್ನು ತೆಗೆದುಕೊಂಡು ಲಾರಿಯಲ್ಲಿ ಪಯಣಿಸುತ್ತಿದ್ದಾಗ ಲಾರಿಯ ಜನ ಅವನಿಂದ ಹಣವನ್ನು ಕಿತ್ತುಕೊಂಡು ಅವನನ್ನು ಚೆನ್ನಾಗಿ ಬಡಿದು ಕಾಲು ಮುರಿದರಂತೆ. ಅನಂತರ ಬೇರೆ ಬಸ್ಸಿನವರು ಅವನನ್ನು ಮುಂಬೈಗೆ

## ೨೦

"ಮೋಹಿನೀ....!"

ಆ ಕರೆ ಕಿವಿಯನ್ನು ಮುಟ್ಟಿತು; ಗಂಟಾರವ ಮೊಳಗಿದ ನಂತರ ಮಧುರ ರವ ಕರ್ಣ ಪಟಲ ಮೇಲೆರವರವಿಸುವಂತೆ ದನಿಯು ಮಾಧುರ್ಯ ಮನವನ್ನು ಮುದ್ದಿಸುವ ಮಂತ್ರ. ಆ ಕ್ಷಣವೇ ಒಳ ಹಜಾರಕ್ಕೆ ಹೋಗಿ "ನೀವ್ರ....ಕರೆದಿರಾ?" ಎಂದಳು ನಯವಿನಯಗಳ ಗಣಿಯಾಗಿ, ವೃದ್ಧ ಜೀವ ಕುರ್ಚಿಯ ಮೇಲೆ ಕುಳಿತ ರೀತಿ, ಶಾಂತ-ಪ್ರಶಾಂತ ಪ್ರವೃತ್ತಿ ಆತ್ಮ ಶ್ರೀಮಂತಿಕೆಗೆ ಸಾಕ್ಷಿ! ಸುಡುಬಿಸಿಲಿನಲ್ಲಿ ನಡೆದೇ ಬಂದಿದ್ದಾನೆ ಯಜಮಾನ.

ಅವನು ಪತ್ರಿಕೆಯನ್ನು ಮಡಚಿ ಕೇಳಿದ "ಹೇಗೆ ನಡೆಯುತ್ತಿದೆ ನಿನ್ನ ಬಾಲವಾಡಿ?" ದನಿಯಲ್ಲಿ ಪ್ರೇಮರಸವೇ ಹರಿದು ಬಂತು.

"ಪರವಾಯಿಲ್ಲ....ಸ್ಥಳ ಸಂಕೋಚ. ಹೆಚ್ಚು ಮಕ್ಕಳ ಸೇರ್ಪಡೆಗೆ ಕಷ್ಟ. ನಮ್ಮ ಕಾಲೋನಿಗೆ ಹತ್ತಿರವಾಗಿ ಹೆಚ್ಚು ಸ್ಥಳವಿರುವ ಮನೆ ಸಿಕ್ಕಿದರೆ ಒಳ್ಳೆಯದು. ಇದುವರೆಗಿನ ನಮ್ಮ ಪ್ರಯತ್ನವೆಲ್ಲಾ ನಿಷ್ಫಲ. ಕಾಲೋನಿಯಿಂದ ಹೊರಗಡೆ ತೆರೆದರೆ ಹೊರಗಣ ಮಕ್ಕಳೂ ಬರುತ್ತಾರೆ....ಮನೆ ಹುಡುಕಲು ನನ್ನ ಗೆಳತಿಯರಿಗೆ ಹೇಳಿರುವೆ."

"ನೀನೊಬ್ಬಳೇ ನಿಭಾಯಿಸಬಲ್ಲೆಯಾ?"

"ಇಲ್ಲ ಸರ್, ಸಧ್ಯಕ್ಕೆ ನೆರೆಮನೆಯವರು ಸಹಾಯ ನೀಡುತ್ತಾರೆ. ಸರಿಯಾದ ಮನೆ ಸಿಕ್ಕಿದರೆ ಗೆಳತಿಯರೊಡನೆ ಕ್ರಮವತ್ತಾಗಿ ನಡೆಸಬಹುದು" ದನಿಯಲ್ಲಿ ಭರವಸೆಯಿತ್ತು.

"ನಮ್ಮದೊಂದು ಮನೆ ಸಧ್ಯ ಖಾಲಿಯಾಗಲಿದೆ. ನಾಲ್ಕು ಕೊಠಡಿಗಳಿವೆ. ಮಧ್ಯೆ ದೊಡ್ಡ ಹಜಾರ. ಸುತ್ತಮುತ್ತ ಅಂಗಳ-ಕಾಂಪೌಂಡ್ ಎಲ್ಲಾ ಇದೆ. ನಿನ್ನ ಕಾಲೋನಿಗೂ ಹತ್ತಿರ. ನೀನು ಬಾಡಿಗೆ ಕೊಡಬಲ್ಲೆಯಾ?"

"ಖಂಡಿತ ಕೊಡಬಲ್ಲೆ ಸರ್! ಯಾವಾಗ ಖಾಲಿಯಾಗುತ್ತೆ?"

"ಬಹುಶಃ ಒಂದೆರಡು ತಿಂಗಳಲ್ಲಿ. ನಾಲ್ಕೈದು ವರ್ಷಗಳಿಂದ ರಿಪೇರಿ ಮಾಡಿಲ್ಲ.... ಮನೆ ಖಾಲಿಯಾದ ನಂತರ ರಿಪೇರಿಯಾಗಬೇಕು. ಅದಕ್ಕೆ ಐನೂರೈವತ್ತು ಬಾಡಿಗೆಕೊಟ್ಟು ರಿಪೇರಿ ಖರ್ಚುವೆಚ್ಚ ವಹಿಸಿಕೊಳ್ಳಬೇಕು... ಏನು ಹೇಳುತ್ತೀ ?"

"ಆಗಲಿ ಸರ್!"

"ಔಟ್ ಹೌಸ್ ಸಹ ಉಂಟು. ಶಾಲೆಗೆ ಅನುಕೂಲವಾಗಿದೆ. ಮನೆಯನ್ನು ಚೆನ್ನಾಗಿಟ್ಟುಕೊ, ಹಳೆಯ ಮನೆ. ಸ್ವಲ್ಪ ನಿಗಾ ಇರಬೇಕು."

"ದಯಮಾಡಿ ನನಗೇ ಇರಲಿ ಸರ್. ನಿಮ್ಮ ಉಪಕಾರ ಎಂದೂ ಮರೆಯಲಾರೆ" ಮಾತು ಮುಗಿಯುವುದರೊಳಗಾಗಿ ಸುಖಾಶ್ರುಗಳು ಮೊಳೆತುವು ಕಣ್ಣುಗಳಲ್ಲಿ.

"ಖಾಲಿಯಾದ ಮೇಲೆ ಬೀಗದಕ್ಕೆ ಕೊಡುವೆ ನೋಡಿಕೊಂಡು ಬಾ."

"ಆಗಲಿ ಸರ್!"

ತಾನು ತೆಗೆದುಕೊಂಡ ಸಾಲದಲ್ಲಿ ಆಗಲೇ ಇನ್ನೂರೈವತ್ತು ಹಿಂದಿರುಗಿಸಿದ್ದಾಳೆ. ದಿನವೂ ಮಾಡುವ ಕೆಲಸಕ್ಕೆ ಪಗಾರ ತೆಗೆದುಕೊಳ್ಳುತ್ತಲಿಲ್ಲ.

ಒಡೆಯನ ಔದಾರ್ಯ ಮನವನ್ನು ತುಂಬಿತು. ಸಂತಸದಿಂದ ಅಂದಿನ ಕೆಲಸ ಮುಗಿಸಿ ಮನೆ ಮುಟ್ಟಿದಾಗ ಸಂಜೆ ಆರರ ಸಮಯ.

ಮಕ್ಕಳು ತಾಯಿಯ ಕೈ ಕಡೆ ನೋಡುತ್ತಿದ್ದಂತೆಯೇ ಕ್ಯಾರಿಯರನ್ನು ಮೇಜಿನ ಮೇಲಿಟ್ಟು, "ಇಂದು ನಾನು ಅಡಿಗೆ ಮಾಡಬೇಕಿಲ್ಲ. ನಾಲ್ಕು ಜನಕ್ಕೂ ಸಾಕು. ಇಂದಿನ ಉಳಿಕೆ."

ಮೋಹಿನಿ ಕೈಕಾಲು ತೊಳೆದು ಮುಖ ಮಜ್ಜನ ಮಾಡಿ ದೇವರಿಗೆ ದೀಪ ಇಟ್ಟಾಗಲೇ ತಲೆಬಾಗಿಲ ಕರೆ ಗಂಟೆಕರೆ ನೀಡಿತು. ಕುಕ್ಕೂ. ಕುಕ್ಕೂ. ಕುಕ್ಕೂ. ಕುಕ್ಕೂ.

ಸಕ್ಕೂ ಬಾಗಿಲು ತೆಗೆದಳು.

ಸುಮನಾ ಒಳ ಬಂದಳು. ಮುಖದಲ್ಲಿ ಜೀವಕಳೆಯೇ ಇಲ್ಲ. ಜಾಹೀರಾತಿಗೆ ಬೀರುವಂತಹ ಕೃತಕ ನಗೆಯನ್ನು ಹರಿಸಿದ. ಅವಳನ್ನು ಅತ್ಯಂತ ಆತ್ಮೀಯತೆಯಿಂದ ಬರಮಾಡಿಕೊಂಡ ಮೋಹಿನಿ,

"ಏನಮ್ಮಾ, ಏನೋ ಒಂದು ಬಗೆಯಾಗಿದ್ದೀ, ಆರೋಗ್ಯವಿಲ್ಲವೇ?" ಎಂದಳು ಪ್ರೇಮ ಕಾತರದಿಂದ.

"ದೈಹಿಕ ಆರೋಗ್ಯಕ್ಕೆ ಕುಂದಿಲ್ಲ. ಮಾನಸಿಕ ಆರೋಗ್ಯಕ್ಕೆ ಧಕ್ಕೆ!"

"ಏನಾಯಿತು? ಏನು ಹೇಳು?"

"ಅಣ್ಣಂದಿರಿಬ್ಬರಿಗೂ ಮದುವೆ ನಿಶ್ಚಯವಾಯಿತು!"

ಎಲ್ಲರ ಮುಖದಲ್ಲೂ ನಗುವಿನಲೆ ಉಕ್ಕಿ ಹರಿಯಿತು.

ಸುಮನಳನ್ನು ಬಳಿಯಲ್ಲಿ ಕೂಡಿಸಿಕೊಂಡು ಕೇಳಿದಳು "ಯಾವಾಗ ಮದುವೆ?"

"ಬಹುಶಃ ಮುಂದಿನ ತಿಂಗಳ ಮಧ್ಯ ಭಾಗದಲ್ಲಿ."

"ಬೇಕರಿ ಯಜಮಾನರದೊಂದು ಮನೆ ಖಾಲಿಯಾಗುತ್ತದಂತೆ ಅದನ್ನು ಕೊಡುವೆ ಎಂದಿದ್ದಾರೆ. ನೀನು ಇಲ್ಲೇ ಬಂದು ಬಿಡು. ಇಬ್ಬರೂ ಕೂಡಿ ಶಾಲೆ ನಡೆಸೋಣ."

"ಯಾವಾಗ ಕೊಡುತ್ತಾರೆ?"

"ಎರಡು ತಿಂಗಳಲ್ಲಿ ಖಾಲಿಯಾಗುತ್ತದಂತೆ. ಅನಂತರ ಒಂದೆರಡು ತಿಂಗಳು ರಿಪೇರಿ ಇದೆಯಂತೆ, ಹೋಯ ಪಕ್ಕ ನಾಲ್ಕೈದು ತಿಂಗಳು...."

"ಅಲ್ಲಿಯ ತನಕ....?" ನಿಟ್ಟುಸಿರುಬಿಟ್ಟಳು ಸುಮನಾ.

"ಹೇಗಾದರೂ ಸಹಿಸಿಕೋ ಸುಮನಾ."

"ಆ ಶಾಲೆ ಮತ್ತು ಮನೆ ಎರಡೂ ಬಿಡಬೇಕಾಗಿದೆ. ಬಿಡುವತನಕ ಅವಸರ."

"ಕೇಳು! ಒಂದೆರಡು ತಿಂಗಳು ಮದುವೆಯ ಗದ್ದಲದಲ್ಲಿ ಕಳೆಯುತ್ತದೆ. ಮತ್ತೆರಡು ತಿಂಗಳು ಮದು ಮಕ್ಕಳು ಮಧುಚಂದ್ರದಲ್ಲಿ ಕಳೆಯುತ್ತಾರೆ. ಅಲ್ಲಿಗೆ ನಾಲ್ಕು ತಿಂಗಲು ಕಳೆದು ಹೋಗುತ್ತದೆ. ಚಿಂತೆ ಬೇಡವೇ ಬೇಡ."

"ನೀನು ಖಂಡಿತ ನನಗೆ ಸ್ಥಳ ಕೊಡುತ್ತಿ ಅಲ್ವ."

"ಖಂಡಿತ! ಖರ್ಚು ವೆಚ್ಚ ಹಂಚಿಕೊಳ್ಳೋಣ."

"ಆಗಲಿ, ಅಲ್ಲಿಯ ತನಕ ಜೀವ ಗಟ್ಟಿ ಮಾಡಿಕೊಳ್ಳುವೆ!"

ಮೋಹಿನಿ ಮುಗುಳು ನಕ್ಕಳು.

ಸಕ್ಕೂ ನಡುನೆ ಬಾಯಿ ಹಾಕಿದಳು "ನೀವು ಯಾವಾಗಲೂ ಮಕ್ಕಳನ್ನು ಕರೆತರುವುದಿಲ್ಲ. ಹೇಗಿದ್ದಾರೆ ಕೃಪ-ಕೃಷ್ಣ?"

"ಚೆನ್ನಾಗಿದ್ದಾರೆ, ಚೇಷ್ಟೆ ಜಾಸ್ತಿ!"

"ಎಲ್ಲಾ ಮಕ್ಕಳೂ ಹಾಗೆಯೇ ಬಿಡಿ."

"ಇನ್ನೊಂದು ಸಲ ಬರುವಾಗ ಕರೆದುಕೊಂಡು ಬರುವೆ."

"ಖಂಡಿತ ಕರೆತರುತ್ತೀರಾ? ಆಂಟಿ"

"ಇಲ್ಲೇ ಮಕ್ಕಳೊಂದಿಗೆ ನಾನೂ ಇದ್ದು ಬಿಡಲೇ?"

"ಓ! ಆಗಲಿ!" ನೀನಾ-ಮೀನಾ ಕೂಡ ದನಿಗೂಡಿಸಿದರು.

"ಅವರು ಬಂದರೆ ನಿಮ್ಮ ಮನೆ ದಿವಾಳಿ ಏಳುತ್ತೆ!" ಕಿಲಕಿಲ ನಕ್ಕಳು ಸುಮನಾ.

"ನಾವು ಸರಿಪಡಿಸಿಕೊಳ್ಳುತ್ತೇವೆ. ನೀವು ಬರುವಾಗ ಇಲ್ಲಿಗೆ ಕರೆ ತನ್ನಿ

ಆಂಟೀ!"

"ಆಗಲಿ; ಆಗಲಿ."

ಅನಂತರ ಸುಮನಾ ಸ್ವಲ್ಪ ಹೊತ್ತಿದ್ದು ತನ್ನ ಮನೆಗೆ ಹೊರಟಳು. ಅವಳನ್ನು ಕಳುಹಿಸಿ ಬರಲೆಂದು ದೂರದ ತಿರಿವಿನವರೆಗೆ ಹೊರಟಳು ಮೋಹಿನಿ.

ಹೊರ ಜಗತ್ತಿನಲ್ಲಿ ಮುಸ್ಸಂಜೆಯ ಪೆಂಪು-ಸೊಂಪು-ತಂಪುಗಳ ಸಂಮಿಶ್ರ ವಾತಾವರಣದಲ್ಲಿ ಪಕ್ಷಿ ಸಮಾಜದ ಸಂಧ್ಯಾರಾಗದುಲಿಯ ರಸಧಾರೆ ಅದೆಷ್ಟು ಮನಮೋಹಕವೋ......

* * *

ಆರು ವಾರಗಳು ಹೇಳ ಹೆಸರಿಲ್ಲದಂತೆ ಉರುಳಿ ಹೋದುವು.

ಗೋಪುವನ್ನು ಕರೆತಂದು ಇಲ್ಲಿನ ಆಸ್ಪತ್ರೆಗೆ ಸೇರಿಸಿದ ಸುದ್ದಿ ಬಂದಿತು. ಗೋಪು, ಹೆಂಡತಿ ಮಕ್ಕಳನ್ನು ನೋಡಲು ಇಚ್ಛಿಸಿದ್ದಾನೆಂದು ಮರುದಿನದ ಕಳಕಳಿಯ ನಿರೂಪ. ಆ ಮಾತಿಗೆ ಏನೊಂದೂ ಉತ್ತರಿಸಲಿಲ್ಲ ಮೋಹಿನಿ. ಅವನು ಈ ಊರಿಗೆ ಬರದಿದ್ದರೆ ಲೇಸಾಗಿತ್ತು ಎಂದಿತು ನೊಂದು ನೀರಾದ ಮನಸ್ಸು; ಹೃದಯ ಬನದ ಪಕ್ಷಿ ಚೀರಿತು.

"ನೀನು ಹೋಗದಿದ್ದರೂ ತಪ್ಪೇನಿಲ್ಲ. ಆ ಪಾಪಿಯನ್ನು ನೋಡದಿರುವುದು ಪರಮ ಲೇಸು!"

"ಖಂಡಿತ ನಾನು ಹೋಗಲಾರೆ" ತಲೆಯಾಡಿಸಿದಳು ಅವಳು.

ಏನನ್ನೋ ಯೋಚಿಸುತ್ತಿದ್ದ ಶ್ಯಾಂ "ಅವನು ಕಳುಹಿಸಿದ ನಿರೂಪ ನಿನಗೆ ಮುಟ್ಟಿಸಬೇಕಿತ್ತು ಅಷ್ಟೆ....ನನಗೂ ಅವನನ್ನು ನೋಡುವುದು ಬೇಡವೇ ಬೇಡ."

"ನೀತಿನಿಷ್ಠೆ-ಧರ್ಮನಿಷ್ಠೆ ಇಲ್ಲದವರು ಮನುಷ್ಯರೇ ಅಲ್ಲ."

"ಆತ್ಮಪೂರ್ವಕವಾಗಿ ಮಾಡಿದ ಅಪರಾಧಕ್ಕೆ ಕ್ಷಮೆಯೇ ಇಲ್ಲ."

"ಶ್ಯಾಮಣ್ಣಾ! ಕೋರ್ಟು ವ್ಯವಹಾರ ಹೀಗೆ ಎನ್ನುವುದುಂಟೇ? ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಬರೆ ಹಾಕಿದರು ಎಂಬ ಗಾದೆ ಉಂಟು. ಅವನು ಬಿಡುಗಡೆಯಾಗಿ ಮರಳುವ ಮುನ್ನ ನಾನು ಈ ಕಾಲೋನಿ ಬಿಟ್ಟಿದ್ದರೆ ಸಾಕು."

"ಓ! ಅವನನ್ನೇನು ಇಷ್ಟರಲ್ಲೇ ಬಿಡುತ್ತಾರೆಯೇ? ಕಠಿಣ ಶಿಕ್ಷೆ ಅನುಭವಿಸಿಯೇ ಹೊರಬರಬೇಕು. ಕೊನೆಯಪಕ್ಷ ಎರಡು ಮೂರು ವರ್ಷಗಳಾದರೂ ಆಗಬಹುದು....."

ಮೋಹಿನಿ ಮಾತಾಡದೆ ಸಮಾಧಾನದ ಉಸಿರು ಬಿಟ್ಟಳು. ನಿಶ್ಚಲ ನೇತ್ರಗಳು ಉಜ್ವಲವಾಗಿ ಬೆಳಗಿದುವು. ಸ್ವಲ್ಪಹೊತ್ತು ರುದ್ರಮೌನ ರಾಜ್ಯವಾಳಿತು. ಅನಂತರ ಮೋಹಿನಿಯೇ ಮೌನ ಮುರಿದಳು.

"ಜನ್ಮತಃ ನಾನು ನತದೃಷ್ಟೆ."

ದನಿ ಒಡಲಾಳದಿಂದ ಹೊರಬಿತ್ತು. ಖಿನ್ನ ಮುಖಬಿಂಬದ ಮೇಲೆ ಮಾನಸಿಕ-ಬೌದ್ಧಿಕ ತುಮುಲ ಚಿತ್ರವತ್ತಾಗಿ ಅಚ್ಚೊತ್ತಿದಂತೆ ಕಪ್ಪು ಛಾಯೆ ದಟ್ಟೈಸಿತು. ವಸಂತ್ ಚಿತ್ತಭಿತ್ತಿಯ ಮೇಲೆ ಸುಳಿದಳಿದ. ದುರ್ವಿಧಿ ಜೀವನಮಾರ್ಗ ಯೋಗದಲ್ಲಿ ಹೆಜ್ಜೆ ಹೆಜ್ಜೆಗೂ ಮುಳ್ಳು ನೆಟ್ಟಿತು. ಇನ್ನು ಮುಂದಾದರೂ ಸಂಕಷ್ಟಗಳು ಆರುಗಾದರೆ ಸಾಕು....

ಅವಳ ಮಾನಸಿಕ ತುಮುಲವನ್ನು ಗಮನಿಸಿದ ಶ್ಯಾಂ "ಜೀವನ ಸೂತ್ರವೇ ಆಗಲೀ, ಭವಿಷ್ಯವೇ ಆಗಲೀ ನಮ್ಮ ಕೈಲಿಲ್ಲ ಬಿಡು. ಸಮಯೋಚಿತವಾಗಿ ಮುನ್ನಡೆಯುವುದೇ ಉತ್ತಮ. ಈ ಆಗು-ಹೋಗುಗಳನ್ನು ದೈವದ ಪಾದಕ್ಕರ್ಪಿಸಿದರಾಯಿತು."

ಪಾಶ್ಚಾತ್ಯ ರಾಷ್ಟ್ರಗಳತ್ತ ದೃಷ್ಟಿ ಹಾಯಿಸಿದರೆ ನಮ್ಮ ಸ್ಥಿತಿ ನಮಗೆ ನಾಚಿಕೆ ತರುತ್ತದೆ. ನಮ್ಮದು 'ಸುಸಂಸ್ಕೃತಿ' ಎಂದು ಹೇಳಿಕೊಳ್ಳುವ ನಾವು ಅದರಲ್ಲಿ ನಮ್ಮ ಕಲ್ಯಾಣವನ್ನು ಕಂಡಿಲ್ಲ ಎಂದರೆ ಏನು ಹೇಳುತ್ತೀರಿ ?....ನಮ್ಮ ಮಂದಗಾಮಿತ್ವಕ್ಕೆ ಏನು ಅರ್ಥ? ಕೂಲಂಕಶವಾಗಿ ಯೋಚಿಸಿ ನೋಡಿದರೆ ಕಂಡು ಬರುವ ಮೊತ್ತ ನಾರೀ ಶ್ರೀಚರಣಗಳಲ್ಲಿ ದಿಟ್ಟತನವನ್ನು ಕಾಣದ ಯಾವ ಕಾರ್ಯವೂ ಸಫಲವಾಗಲಾರದು. ಆ ದಿವ್ಯಾನುಭೂತಿಗೆ ಅಗತ್ಯವಾದ ಜ್ಞಾನ ಸಂಪತ್ತಿಯನ್ನು ನೀಡದೆ ಶಿಕ್ಷಣರಂಗದಲ್ಲಿ ವಂಚಿತರನ್ನಾಗಿ ಮಾಡಿ ಶಾಸ್ತ್ರಗಳ ಸಂಕೋಲೆ ತೊಡಿಸಿರುವುದು ಅಧರ್ಮ, ಅನ್ಯಾಯ. ಅದೇ ನೇರಕ್ಕೆ, ಸ್ತ್ರೀಜನರೂ ಧರ್ಮದ ಹೆಸರಿನಲ್ಲಿ, ನೀತಿಯ ಹೆಸರಿನಲ್ಲಿ ಆಲೋಚನಾರಹಿತರಾಗಿ ತಮ್ಮದೇ ಆದ ಪ್ರಪಂಚದಲ್ಲಿ ವಿಹರಿಸುವುದನ್ನು ನೋಡಿದರೆ ಒಡಲೆಲ್ಲಾ ಸಂಕಟ. ಸ್ವಾತಂತ್ರ್ಯ ಪೂರ್ವ ಜನರಾಶಿ ಹೇಗಿತ್ತೋ ಹಾಗೇಯೇ ಇಂದಿಗೂ ಎಂದಿಗೂ ಉಳಿಯುವಂತಹ ಗಾಢಾಂಧಕಾರ ಮಾರ್ಗ ಹಿಡಿದಿರುವುದರ ಅರ್ಥವೇನು? ವಿದ್ಯಾದಾರಿದ್ರ್ಯ ಎನ್ನೋಣವೇ? ವಿದ್ಯಾ ಸರಸ್ವತಿ ಎಲ್ಲೆಡೆ ರಂಜಿಸುತ್ತಿದ್ದಾಳೆ ...ಧರ್ಮದಾರಿದ್ರ್ಯ ಎನ್ನೋಣವೇ? ಧರ್ಮಲಕ್ಷ್ಮಿ ಪೂಜಿತೆಯಾಗಿದ್ದಾಳೆ. ಅಂದಮೇಲೆ ಏಕೆ ಹೀಗೆ? ಮಂದಗಾಮಿತ್ವ....ಪ್ರತಿಯೊಂದು ಹೆಜ್ಜೆಯಲ್ಲಿಯೂ ಮಂದಗಾಮಿತ್ವ...ಅರ್ಥವಾಗದ ಮಂದಗಾಮಿತ್ವ.

"ಧರ್ಮಸಂಸ್ಕೃತಿಯಲ್ಲಿ ಮಿಂದು ಪುನೀತವಾದ ಸತೀತ್ವ ತಚ್ಛವೆಂದು ಹೇಳಲಾರೆ. ಆದರೆ, ಅದನ್ನೇ ಸ್ತ್ರೀ ಜೀವನದ ಪರಮ ಲಕ್ಷ್ಯವೆಂದು ಭಾವಿಸಿದರೆ ತಪ್ಪಾಗುತ್ತದೆ. ಮುಖ್ಯವಾಗಿ ಎಲ್ಲೆಲ್ಲಿ ಸುಧಾರಣೆಯಾಗಬೇಕೋ ಅಲ್ಲಲ್ಲಿ ಹಿಂಜರಿದ ಸಮಾಜ ಈ ದಿಶೆಯಲ್ಲಿ ಮುನ್ನುಗ್ಗುವುದರ ಅರ್ಥವಾದರೂ ಏನು?"

"ಸ್ವತಂತ್ರ್ಯ ರಾಷ್ಟ್ರದ ಜನ ಸ್ವಾತಂತ್ರ್ಯದ ತಿರುಳನ್ನು ಕಂಡುಕೊಂಡಿದ್ದಾರೆಯೇ? ಅದರ ರುಚಿಯನ್ನು ಸವಿದಿದ್ದಾರೆಯೇ? ಇದನ್ನೆಲ್ಲಾ ಯೋಚಿಸುತ್ತಾ ಹೋದರೆ ನಮಗೆ ಸಮಾಧಾನ ಮೂಡುವಂಥ ಉತ್ತರ ಸಿಗಲಾರದು...."

ಅವಳು ಏನೇನು ಹೇಳಿದಳೋ ಅದನ್ನೆಲ್ಲಾ ಮಾನಸಿಕ ಮೂಸೆಯಲ್ಲಿ ಕಡೆದು ಕರಗಿಸಿದಾಗ ಉಳಿದ ಸಾರ....ಸತೀತ್ವ ತುಚ್ಛವೆಂದು ಹೇಳಲಾರೆ. ಆದರೆ, ಅದನ್ನೇ ಸ್ತ್ರೀ ಜೀವನದ ಪರಮ ಲಕ್ಷ್ಯವೆಂದು ಭಾವಿಸಿದರೆ ತಪ್ಪಾಗುತ್ತದೆ....

ಎಂತಹ ವಾದ? ಶ್ಯಾಂ ಆಲೋಚನಾ ಭಾರದಿಂದ ಸುಮ್ಮನಾದ.

ಮೋಹಿನಿ ಎದೆಯಾಳದಿಂದ ದೀರ್ಘವಾದ ಉಸಿರೊಂದನ್ನು ಹೊರ ಹಾಕಿ "ಭಾರತೀಯರು ನಾವು. ನಮ್ಮಲ್ಲಿ ಭೋಧಕರು ಕಂಠಶೋಷಣೆ ಮಾಡಿದ್ದಾರೆ. ಕವಿಗಳು ವಿಚಾರಘನ ಗ್ರಂಥರಾಶಿಯನ್ನು ಸೃಷ್ಟಿಸಿದ್ದಾರೆ. ಸಮಾಜಸುಧಾರಕರು ಚಿತ್ರವತ್ತಾಗಿ ಸಮಾಜ ಸುಧಾರಣೆಯ ಮಾರ್ಗ ತೋರಿದ್ದಾರೆ. ಮುನಿ ಋಷಿಗಳು ಜೀವ ತೇಯ್ದಿದ್ದಾರೆ. ಕಾಲಮಾನ ಕರಗಿ ಹೋಗಿದೆ. ರಾಜ್ಯ ಸೂತ್ರಗಳು ಈ ದಿಶೆಯಲ್ಲಿಯೇ ಮಾರ್ಗ ಸೂಚಿಯಾಗಿವೆ. ಆದರೇನು? ಎಲ್ಲವೂ ಗೋರ್ಕಲ್ಲ ಮೇಲೆ ಮಳೆಗರೆದಂತೆ ಸರ್ವಜ್ಞ ಆಗಿವೆ. ಇದಕ್ಕೆಲ್ಲಾ ಮೂಢ ನಂಬಿಕೆಯೊಂದೇ ಆಧಾರ ಎಂದು ನಾನೆಣಿಸಲಾರೆ."

"ಭಾಗಶಃ ಮೂಢ ನಂಬಿಕೆಯೆಂದರೆ, ಭಾಗಶಃ ಅಜ್ಞಾನ ವೈಪರೀತ್ಯ....ಒಟ್ಟಿನಲ್ಲಿ ಅದೃಷ್ಟಹೀನತೆ ಎನ್ನಬಹುದೇನೋ...."

"ನಿಜ; ಶ್ಯಾಮಣ್ಣಾ! ಮನುಷ್ಯರಾಗಿ ಹುಟ್ಟಿ ಮಾನವೀಯತೆಯನ್ನು ಬೆಳಗಿ ತೊಳಗುವ ಅವಕಾಶವನ್ನು ಸ್ವಂತ ಕೈಗಳಿಂದಲೇ ತಳ್ಳುವ ದುರದೃಷ್ಟಕರ ಜೀವಮಾನ ಎಂದಿಗೂ ಉಳಿಯಬಾರದು ಎಂಬುದು ನನ್ನ ಆಶಯ....ಆದರೆ, ಇಂದು ಕಲಿತವರಿಗೂ ಇದೆಲ್ಲಾ ಏಕೆ ಅರ್ಥವಾಗುವುದಿಲ್ಲವೋ ಅದೇ ಪರಮಾಶ್ಚರ್ಯ...."

ಶ್ಯಾಂ ಸ್ವಲ್ಪ ಹೊತ್ತು ಸುಮ್ಮನೆ ಯೋಚನಾಕ್ರಾಂತನಾದ. ಮೋಹಿನಿಯ ವಾವಸರಣೆ ಸ್ಮೃತಿಪಟಲದ ಮೇಲೆ ಪುನಃಪ್ರನಃ ಮಿಡಿಯಿತು....ಸ್ತ್ರೀ ಸಮಾಜದ

ಶುಭ ಚರಣಗಳಲ್ಲಿ ದಿಟ್ಟತನವನ್ನು ಕಾಣದ ಯಾವ ಕಾರ್ಯವೂ ಸಫಲ ವಾಗಲಾರದು....ಸತೀತ್ವ ತುಚ್ಛವೂ ಅಲ್ಲ; ಬಾಳಿನ ಪರಮ ಲಕ್ಷ್ಯವೂ ಅಲ್ಲ.... ಅದೇ ವಾಕ್ಯಸರಣಿ ಕರ್ಣಪಟಲದ ಮೇಲೆ ಗುಯ್‌ಗುಡುತ್ತಲೇ ಇತ್ತು.

ಆ ವೇಳೆಗೆ ಚಂದ್ರಿ ಒಳಗಡೆ ಪದಾರ್ಪಣೆ ಮಾಡಿದಳು.

## ೨೧

ಊರಿನ ವರ್ತಮಾನ ಪತ್ರಿಕೆಯಲ್ಲಿ ಬಿಸಿ ಬಿಸಿ ಸುದ್ದಿ:...ಅಶೋಕ ಮತ್ತು ಶಶಿ ಎಂಬ ತರುಣರು ಕಾಲೇಜ್ ವಿದ್ಯಾರ್ಥಿನಿ ಕೋಮಲೆಯ ಮೇಲೆ ಅತ್ಯಾಚಾರ ನಡೆಸಿ ಅವಳನ್ನು ಕೊಲೆ ಮಾಡಿದ್ದಾರೆ. ಇಬ್ಬರು ತರುಣರೂ ರಘುನಾಥ ಎಂಬ ವಾಣಿಜ್ಯೋದ್ಯಮಿಯ ಮಕ್ಕಳು ಎಂಬುದಾಗಿ ತಿಳಿದುಬಂದಿದೆ.... ತರುಣರನ್ನು ಪೋಲೀಸರು ಬಂಧಿಸಿ ತನಿಖೆ ನಡೆಸುತ್ತಿದ್ದಾರೆ.

ಅದನ್ನು ನೋಡುತ್ತಲೂ ಮೋಹಿನಿ ದೇಹದಾದ್ಯಂತ ಒಮ್ಮೆ ಕಂಪಿಸಿದಳು. ನಾಡಿದ್ದು ನಿರ್ಮಲಳ ಧಾರಾಮುಹೂರ್ತ. ಇಂದು ಈ ಪರಿಸ್ಥಿತಿ. ಹಾಯ್ ಪರಮಾತ್ಮ!

"ಏನಮ್ಮಾ, ದಿಗ್ಭ್ರಮೆ ಹೊಂದಿದಂತೆ ಕುಳಿತುಬಿಟ್ಟೆ, ಏನು ಸಮಾಚಾರ?" ಅಚ್ಚರಿಯಿಂದ ಕೇಳಿದಳು ಸಕ್ಕೂ.

"ಬಾಯಿಲ್ಲಿ, ನೋಡು!"... ಮುಂದೆ ಮಾತೇ ಹೊರಡಲಿಲ್ಲ ಮೋಹಿನಿಗೆ.

ಆ ಮನೆಯ ಹೊಸ್ತಿಲು ದಾಟಿ ಯಾವ ಕಾಲವೋ....ಆದರೂ ಎದೆಯಾಳ ದಲ್ಲಿ ಮೂಡಿದ ತಳಮಳ ಅಸಾಮಾನ್ಯ. ಅನುರಾಗಾನುಬಂಧ ಮನದ ಕಿಂಡಿಯಲ್ಲಿ ಎಲ್ಲಿ ಅಡಗಿತ್ತೋ, ಇಂದು ಭುಗಿಲೆದ್ದಾಗಲೇ ಅದರ ಅರಿವು. ಒಂದುಗಳಿಗೆ ಕಣ್ಣುಗಳನ್ನು ಮುಚ್ಚಿ ತನ್ನ ನೋವನ್ನು ತಾನೇ ನುಂಗಿಕೊಂಡಳು. ತಾನು ಹೊಸ್ತಿಲು ದಾಟಿದಾಗ ಅಶೋಕ ಆರು ವರ್ಷದವ. ಶಶಿಧರ ನಾಲ್ಕು ವರ್ಷದವ. ಈಗ ಮಕ್ಕಳೆಲ್ಲ ಬೆಳೆದು ದೊಡ್ಡವರಾಗಿದ್ದಾರೆ. ತಮ್ಮ ಕಾಲಮೇಲೆ ತಾವು ನಿಲ್ಲಲು ಶಕ್ತರು ಕೂಡ. ಅಂದಮೇಲೆ ಏಕೆ ಹೀಗೆ?

ಆದರೆ....

ಈ ಜೀವನ ಎಂದೂ ಒಂದೇ ತೆರನಾಗಿರುವುದಿಲ್ಲ. ಯಾವ ಗಳಿಗೆಯಲ್ಲಿ ಯಮಗಂಡವೋ.... ದೇವರಿಗೇ ಗೊತ್ತು. ಇನ್ನು, ಮದುವೆ ನಡೆಯುತ್ತೋ

ಇಲ್ಲವೋ.... ಬೀಗರಿಗೆ ತಿಳಿದರೆ ಇನ್ನಾವ ತಗಾದೆಯೋ ಶ್ರೀಹರೀ! ಮಕ್ಕಳ ಜೀವನ ವಿಕಸನಗೊಳ್ಳದಿದ್ದರೆ ತುಂಬಾ ಕಷ್ಟವೇ! ಭಗವಂತ ಅವರ ಹಣೆಯಲ್ಲಿ ಏನು ಬರೆದಿದ್ದಾನೋ....ಪ್ರಶ್ನೆ ಮನವನ್ನು ಕೊರೆಯಿತು.

ಮೋಹಿನಿ ದೀರ್ಘ ಮೌನಧಾರಣೆ ಮಾಡಿದಳು. ಹೃದಯ ಮೃದಂಗ ವ್ಯಾಪ್ತಿಗೆ ಮೀರಿ ಮಿಡಿಯುತಿದ್ದುದು ಗಮನಕ್ಕೆ ಬಂತು.

ಓದುತಿದ್ದ ಪುಸ್ತಕವನ್ನು ಮುಚ್ಚಿ ನೀನಾ ಮೀನಾ ಬಳಿಗೆ ಬಂದರು....

"ಏನಮ್ಮಾ?"

ಪ್ರಶ್ನೆ ಒಕ್ಕೊರಲಿನಿಂದ ಹೊರಬಿತ್ತು. ಅರಳುಗಣ್ಣುಗಳಲ್ಲಿ ಪ್ರಶ್ನಾರ್ಥಕ ಚಿಹ್ನೆಯ ಸೂಚನೆ ಇಣುಕುತ್ತಿದೆ.

ಮೋಹಿನಿ ವಿಷಯವನ್ನು ಮುಂದಿಟ್ಟು "ಆಗಬಾರದುದು ಆಗಿ ಹೋಗಿದೆ. ಹುಡುಗಿ ಕೂಗಿ ಗಲಾಟೆ ಮಾಡಿದಳು ಎನಿಸುತ್ತೆ. ಕತ್ತು ಹಿಸುಕಿದ್ದಾರೆ! ಯಾರೋ ಹೆತ್ತು ಸಾಕಿದ ಮಕ್ಕಳನ್ನು ಕೊಲ್ಲುವುದು ಎಷ್ಟು ಸುಲಭ? ಛೆ! ಛೆ! ಎಂತಹ ಅನ್ಯಾಯ? "ಓದು ವಿದ್ಯೆ ಕಲಿತವರು ಈ ಮಟ್ಟಕ್ಕಿಳಿವರೆ ಇನ್ನು ಕಲಿಯದವರ ಪಾಡೇನು? ನಮ್ಮ ರಾಷ್ಟ್ರದ ಸಂಸ್ಕೃತಿ ಈ ಮಟ್ಟಕ್ಕೇಕಿಳಿಯಿತು ಎಂಬುದು ಅರ್ಥೈಸಲಾಗದ ಒಗಟು. ಶಿವ ಶಿವಾ! ನಿನಗೇ ಸಂವೇದ್ಯ!"

ಎದೆಯಾಳದಿಂದ ನಿಟ್ಟುಸಿರೊಂದು ಹೊರಹೊಮ್ಮಿತು. ಕಣ್ಣುಗಳು ರಂಗುರಂಗಾದುವು.

ಹಠಾತ್ತನೆ ಅಲ್ಲಿಗೆ ಆಗಮಿಸಿದ ಕಮಲಾ ಒಂದು ಹೆಜ್ಜೆ ಹಿಮ್ಮೆಟ್ಟಿ ನಿಂತು "ಏನು ಸಮಾಚಾರ?" ಎಂದಳು ಗಂಭೀರ ಭಾವದಿಂದ.

"ಈ ಪತ್ರಿಕೆ ಸುದ್ದಿ ನೋಡಿದಿರಾ?" ಎಂದಳು ಸಕ್ಕೂ.

"ಏನು ಹೇಳು?" ಎನ್ನುತ್ತ ಪತ್ರಿಕೆಯತ್ತ ದೃಷ್ಟಿ ಹಾಯಿಸಿ "ಇವರು ನಿನ್ನ ಅಣ್ಣನ ಮಕ್ಕಳಲ್ಲವೇ?"

"ಹೌದು....! ನಾಚಿಕೆಗೇಡು!" ನುಡಿಯಲಾರದೆ ನುಡಿದಳು ಮೋಹಿನಿ.

"ಇದನ್ನು ಕುಸಂಸ್ಕಾರ ಎನ್ನಬೇಡ, ನಾಗರಿಕತೆಯ ತುತ್ತತುದಿ!"

"ನಾಡಿದ್ದು ಬೆಳಿಗ್ಗೆ ನಿರ್ಮಲೆಯ ಧಾರಾಮಹೂರ್ತ, ಮಕ್ಕಳು ಜೇಲಿನಲ್ಲಿ!"

"ಅದಿರಲಿ, ನಿನ್ನ ಕರೆದಿದ್ದಾರೆಯೇ?"

"ಇಲ್ಲ. ಸುಮನಾ ಮನೆಯವರನ್ನೂ ಕರೆದಿಲ್ಲ."

"ಅದೇಕೆ?"

"ಬಹುಶಃ, ನನ್ನ ಸ್ನೇಹದ ವಿರೋಧವೇ ಇರಬಹುದೇನೋ....ಊಹಿಸುವುದು ಕಷ್ಟ."

"ಹೋಗಲಿ ಬಿಡು. ನಡೆಯುವಷ್ಟು ಕಾಲ ನಡೆಯುತ್ತೆ. ಸುಖ ಸಂತೋಷ ಗಳು ಯಾರಿಗೂ ಶಾಶ್ವತವಲ್ಲ...."

"ಬಾ, ಕುಳಿತುಕೋ ಕಮಲಾ! ಆಗಿನಿಂದಲೂ ನಿಂತುಕೊಂಡೇ ಮಾತ ನಾಡುತ್ತಿದ್ದೀ. ನನಗೂ ಮನಸ್ಸಿನ ಮಂಪರದಲ್ಲಿ ಏನೋ ಆಗಿದೆ ಬಿಡು."

"ಅಯ್ಯೋ, ಇದೇನು ವಿಶೇಷವಲ್ಲ. ನೋಡಿದರೆ ಧನಿಷ್ಠರ ಮಕ್ಕಳು.... ಮಾನಿಷ್ಠರಾಗಿ ಬಾಳಬಾರದೇ? ನೋಡು, ಈ ಆಲೋಚನಾ ರಹಿತರಾದ ನರಜಂತುಗಳ ಅವ್ಯವಹಾರಗಳನ್ನು ತೊಡೆಯುವುದರಲ್ಲೇ ಸ್ವತಂತ್ರ ಭಾರತದಲ್ಲಿ ಅನೇಕ ದಶಕ ದಶಕಗಳು ಉರುಳಿ ಹೋದುವು. ಆದರೂ ಇಂದಿಗೂ, ಎಂದಿಗೂ ಅಪರಾಧಗಳು ಮುಗಿಯುವಂತೆಯೇ ಇಲ್ಲ. ಸರ್ವಾಂಗ ಭದ್ರವಾದ ಸರ್ಕಾರ ಹುಟ್ಟುವ ಮುನ್ನ, ಕೋರ್ಟು ಕಛೇರಿಗಳು ತಲೆ ಎತ್ತುವ ಮುನ್ನ, ಕಾಲೇಜುಗಳು ಜನಿಸುವ ಮುನ್ನ ದೇಶದಲ್ಲಿ ಖಂಡಿತವಾಗಿಯೂ ಶಾಂತಿ ನೆಲಸಿತ್ತು ಎನಿಸುತ್ತೆ ನನಗೆ. ಇದಕ್ಕೆ ಉದಾಹರಿಸಲು ಚರಿತ್ರೆಯ ಪುಟಪುಟಗಳನ್ನು ತಿರಿವಿ ಹಾಕ ಬೇಕಾಗಿಲ್ಲ. ನಮ್ಮ ತಿಳಿವಳಿಕೆಗೆ ಬಂದ ಸುದ್ದಿಯೇ ಸಾಕು. ಈ ನಾಗರಿಕ ದಿನಗಳಲ್ಲಿ ಶಾಲಾ ಕಾಲೇಜುಗಳೇನು? ವಿಜ್ಞಾನದ ಮುನ್ನಡೆಯೇನು? ಕಾನೂನಿನ ಕಟ್ಟು ಕಟ್ಟಳೆಗಳೇನು? ಸಂಜೀವನಕ್ಕಾಗಿ ನಾಗರಿಕ ಸೌಲಭ್ಯಗಳೇನು? ಹೀಗೆಯೇ ಯೋಚಿಸುತ್ತ ಹೋದರೆ ಕೊನೆಗಾಣದಷ್ಟು ವಿಷಯ ಕಂಡುಬರುತ್ತದೆ. ಈ ಎಲ್ಲವನ್ನೂ ಮೀರಿ ನಡೆಯುತ್ತಿರುವ ಅಪರಾಧಗಳಿಗೆ ಅರ್ಥವೇನು? ಮಾನವ ಮಾನವತೆಯನ್ನು ಅರಿತುಕೊಳ್ಳದಿರಲು ಕಾರಣವೇನು? ಆತ್ಮಶ್ರೀ ವಿದೂರರಾದ ಜನರಾಶಿಯ ಕಾವಲು ಕಾಯುತ್ತ ಅವರ ಅವಶ್ಯಕತೆಗಳನ್ನು ಪೂರೈಸುವುದರಲ್ಲೇ ವ್ಯರ್ಥ ಕಾಲಹರಣವಾಗಿದೆ ರಾಷ್ಟ್ರಶಕ್ತಿ ಎಂದರೆ ನೀನು ತಪ್ಪಾಗಿ ಭಾವಿಸಬಾರದು. ಕೇಳು, ಭಾರತ ಭಾರತವಾಗಿಯೇ ಉಳಿಯಬೇಕಾದರೆ ಹೇಸು ಕಾರ್ಯಗಳಿಗೆ ತೆರೆ ಬೀಳಲೇ ಬೇಕು."

"ಕಮಲೂ ಇಲ್ಲಿ ಕೇಳು! ಸ್ವಾರ್ಥ, ಸ್ವಾರ್ಥವೇ ಪರಮಾರ್ಥ! ಸ್ವಾರ್ಥ ದಿಂದಲೇ ನಡೆಯುತ್ತಿವೆ ಅಪರಾಧಗಳು....ಹಿಂದಿನ ಕಾಲದಲ್ಲಿ ಧನಲೋಭ ಅಷ್ಟಿರಲಿಲ್ಲ. ಚಿನ್ನ-ಬೆಳ್ಳಿಗಳ ಆಸೆಯೂ ಇರಲಿಲ್ಲ. ಈ ನಾಗರಿಕ ದಿನಗಳಲ್ಲಿ ಹುಟ್ಟಿ ಹೆಮ್ಮರವಾಗಿರುವುದು ಲೋಭ-ಮೋಹ-ಮದ-ಮಾತ್ಸರ್ಯಗಳ ಕೂಟ. ಈ ದುರ್ಗುಣಗಳೇ ಸ್ತ್ರೀ ಜಾತಿಯನ್ನು ಕುರಿಗಳಂತೆ ಸಾಕುವುದಕ್ಕೆ ದಾರಿ. ಇದೆಲ್ಲಾ ಪುರಾತನ ದಿನಗಳಲ್ಲಿ ಸಭ್ಯತೆಯ ಸೋಗನ್ನು ಹಾಕಿಕೊಂಡಿತ್ತು ಎನಿಸುತ್ತೆ. ಇಂದು, ಬದಲಾದ ಕಾಲಮಾನ. ಸ್ತ್ರೀಯರನ್ನು ಕುರಿ ಮೊಲಗಳಂತೆ

ಸಾಕುವುದು ಎಲ್ಲರಿಗೂ ಹಿತ ಎನ್ನಬೇಡ; ಕೆಲವು ಮಂದಿ ಮಾತ್ರ ಹೀನ ಹೃದಯದ ಅಗ್ರಮಾನ್ಯರು. ಇದನ್ನೇ ಚಿರಕಾಲ ಸತ್ಯವೆಂದು ಭಾವಿಸಬಾರದು. ಕ್ರಮಕ್ರಮೇಣ ರೆಕ್ಕೆ ಪುಕ್ಕ ಉದುರಿ ಬಣ್ಣ ಬಯಲಾಗಬಹುದು. ಅಲ್ಲಿಯತನಕ ಸಂಭವಿಸುವ ಯಜ್ಞಕುಂಡದಲ್ಲಿ ಬೇಯುವ ಕರ್ಮಕಾಂಡ ಇದೆಯಲ್ಲಾ ಅದನ್ನು ದಾಟಿದವರು ಧನ್ಯರು!" ನಿರುದ್ವಿಗ್ನತೆಯಿಂದ ನುಡಿದಿದ್ದರೂ ಕಣ್ಣು ಕೆನ್ನೆಗಳಲ್ಲಿ ರಂಗು ಮೂಡಿತು. ದೀನ ಭಾವದಿಂದ ಗೆಳತಿಯ ಕಡೆನಿಟ್ಟಿಸಿದಳು.

ಕಮಲಾ ಅವಳ ಹಸ್ತವನ್ನು ನಲ್ಮೆಯಿಂದ ಅದುಮಿ ಹಿಡಿದುಕೊಂಡು ನುಡಿದಳು.

"ಮೋಹಿನಿ, ಈ ದುಃಖಭರಿತ ಜೀವನವನ್ನು ಉದ್ಧರಿಸಲು ಯಾವುದಾದ ರೊಂದು ಮಾರ್ಗೋಪಾಯವನ್ನು ಕುರಿತು ಆಲೋಚಿಸುವುದರಲ್ಲಿ ನಿಜವಾಗಿಯೂ ಏನೋ ಒಂದು ಬಗೆಯ ಸಂತೃಪ್ತಿ ಇರುತ್ತದೆ. ನಿಜಕ್ಕೂ...... ನಾವೇನೂ ಕಾರ್ಯತಃ ಸಂಪೂರ್ಣ ಸಾಧಿಸಲಾರೆವಾದರೂ ದೂರಗಮ್ಯದ ಹಾದಿಯಲ್ಲಿ ಒಂದು ಹೆಜ್ಜೆ ಮುಂದಿಟ್ಟಿರುವುದು ಸತ್ಯ....ಎಂಬುದು ಆತ್ಮ ಸಂತೃಪ್ತಿ ಅಥವಾ ಸಮಾಧಾನ."

"ಅನಾತ್ಮೀಯ ಜೀವಗಳ ಸಂಘರ್ಷಣೆ ಸಾಮಾನ್ಯವಾದುದೇನೂ ಅಲ್ಲ. ನೀನೆಂದಂತೆ ಅತ್ಯಂತ ಸ್ವಾರ್ಥಮೂಲವಾದ ಬುದ್ಧಿ–ದುಷ್ಕೃತ್ಯ–ದುರಾಚಾರಾಗಳಿಗೆ ಕಾರಣ. ನನ್ನ ಜೀವನದಲ್ಲಿ ಇಲ್ಲಿಯವರೆಗೆ ಸಂದು ಹೋದ ಕಾಲಮಾನ ಒಂದು ರೀತಿಯದು. ಮುಂದಿನ ಅಧ್ಯಾಯವಾದರೂ ಸುವ್ಯವಸ್ಥಿತ ರೀತಿಯಲ್ಲಿ ನಡೆಸುವ ಪ್ರಯತ್ನ ನನ್ನದು. ಆಗಲೇ ಸಕ್ಕೂಗೆ ಹದಿಮೂರು ವರ್ಷ ಪ್ರಾಯ. ಎತ್ತರಕ್ಕೆ ವಯಸ್ಸಿಗೆ ಮೀರಿ ಬೆಳೆಯುತ್ತಿದ್ದಾಳೆ. ನನಗಾಗಲೇ ಚಿಂತೆ ಹಿಡಿದಿದೆ ಈ ಜೀವನ ವನ್ನು ಯಾವ ರೀತಿ ರೂಪಿಸಲಿ ಎಂದು. ಗಂಡಿನಾಶ್ರಯ ಬೇಕಿಸಬಾರದು ಎಂಬುದು ಆತ್ಮ ಭೋಧೆ. ಜೀವನದ ಕ್ಷಣಿಕ ಸುಖ ಭೋಗಗಳ ಪರಿಧಿಯನ್ನು ಎಲ್ಲರೂ ದಾಟಬಲ್ಲರೇ? ಎಂಬುದೂ ಸಹ ಬಹು ದೊಡ್ಡ ಪ್ರಶ್ನೆ. ನೋಡೋಣ, ಭಗವಂತ ಯಾವ ಹಾದಿ ತೋರುತ್ತಾನೋ."

"ಹಾಗೆನ್ನುತ್ತಲೇ ಜೀವಮಾನವೇ ಕಳೆದು ಹೋಯಿತು."

ಇಬ್ಬರೂ ನಕ್ಕುಬಿಟ್ಟರು.

"ಏನೇ ಇರಲಿ, ಕಮಲೂ! ಸ್ತ್ರೀ ಎಂದ ಮೇಲೆ ನಿಂದೆ ನಿಕೃಷ್ಟತೆ ಸಹಜವಾಗಿ ಹೋಗಿವೆ. ಅವಳಲ್ಲಿ ಎಷ್ಟೇ ಧರ್ಮನಿಷ್ಠೆಯಿದ್ದರೂ ಅದು ಅಗಣ್ಯ–ಅನರ್ಥ."

"ನಿಸ್ಸಂಶಯ."

ಹೊತ್ತು ಸರಾಗವಾಗಿ ಉರುಳಿತು.

ಮನಸ್ಸು ಚಿಂತೆಯಿಂದ ಯಾವಾಗ ವಿರಮಿಸಿತೋ, ಹೃದಯ ಸಮುದ್ರದ ಅಲೆಗಳು ಯಾವಾಗ ಶಾಂತವಾದುವೋ, ಚಂದ್ರ ಯಾವಾಗ ಉದಿಸಿ ಮೇಲೇರಿ ಬಂದನೋ, ಶೀತಶೀತಲಗಾಳಿ ಯಾವಾಗ ತಣ್ಣಗೆ ತೀಡತೊಡಗಿತೋ ಆವೊಂದೂ ಗಮನಕ್ಕೆ ಬಂದಿರಲಿಲ್ಲ.

## ೨೨

ಯೋ ಧ್ರುವಾಣಿ ಪರಿತ್ಯಜ್ಯ ಅಧ್ರುವಂ ಪರಿಷೇವತೆ ।

ಸಾಲಾಗಿ ಮೂವರು ಮಕ್ಕಳೂ ಮಲಗಿದ್ದಾರೆ. ನಿದ್ರಾದೇವಿಯ ಮಡಿಲಲ್ಲಿ ಹಾಯಾಗಿ ಉಸಿರಾಡುತ್ತ. ಎಷ್ಟೆಷ್ಟುಮಗ್ಗಲು ಬದಲಾಯಿಸಿದರೂ ಮೋಹಿನಿಗೆ ನಿದ್ದೆ ಬಾರದು. ಮನಸ್ಸು ಶಶಿ–ಅಶೋಕರ ಕಡೆಗೆ ಹರಿದು ಹೃದಯಭಾರವಾಗಿತ್ತು.... ಬೆಳಗಾದರೆ ನಿರ್ಮಲೆಯ ಧಾರಾ ಮಹೂರ್ತ. ಅಣ್ಣ ಅತ್ತಿಗೆ ಆ ಸುಖ–ದುಃಖಗಳ ಸಮುದ್ರದಲ್ಲಿ ಅಲೆಗಳನ್ನು ಹೊಡೆದುಕೊಂಡು ಹೇಗೆ ಮುನ್ನುಗ್ಗುವರೋ.... ತಾನಾದರೂ ಒಂದೆರಡು ಸಾಂತ್ವನದ ಮಾತಾಡೋಣವೆಂದರೆ ಆಹ್ವಾನ ಪತ್ರಿಕೆಯೂ ಇಲ್ಲ, ಕರೆಯೂ ಇಲ್ಲ....ಅಂದಮೇಲೆ ವಿಷಯ ತನ್ನ ಪ್ರವೇಶಕ್ಕೆ ದೂರ. ತನಗೂ ಅದಕ್ಕೂ ಸಂಬಂಧವೂ ಇಲ್ಲ. ಆದರೂ 'ಅನುಬಂಧ' ಎಂಬುದು ಆತ್ಮೀಯವಾದುದು. ತಳ್ಳಿದರೂ ದೂರ ಹೋಗದು; ಪ್ರಯತ್ನಿಸಿದರೂ ಮನಸ್ಸಿನಿಂದ ಮರೆಯಾಗದು.... ಇಬ್ಬರೂ ಚಿಕ್ಕವರಿದ್ದಾಗ ನಿಜಕ್ಕೂ ಒಳ್ಳೆಯ ಮಕ್ಕಳು....ಅತ್ತಿಗೆ ತಾತ್ಸಾರ ಮಾಡಿದರೂ ಮಕ್ಕಳೆಲ್ಲರೂ ನನ್ನ ಪ್ರೀತಿಸುತ್ತಿದ್ದರು. ಆಗಿನ ಮಧುರಬಾಂಧವ್ಯ ಹೇಗೆ ಮರೆಯಲು ಸಾಧ್ಯ? ತಂದೆ–ತಾಯಿಯರ ಕುಮತಿ–ಕುಸಂಸ್ಕಾರ ಮಕ್ಕಳ ಮೇಲೆ ದುಷ್ಪರಿಣಾಮ ಬೀರಿರಬಹುದು....ಅಥವಾ ದುಷ್ಟ ಪರಿವಾರದ ಸಹವಾಸಪರಬಹುದು. ಅಂತೂ, ಕೆಟ್ಟಿತು ಬುದ್ಧಿ.

ಎಲ್ಲಿಂದಲೋ ದೂರ ಗೋಪುರದ ಗಡಿಯಾರ ಗಂಭೀರವಾಗಿ ಗಂಟೆ ಬಾರಿಸಿತು. ಹಾಗೇ ಎಣಿಸಿದಳು ಮೋಹಿನಿ. ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು, ಎಂಟು, ಒಂಭತ್ತು, ಹತ್ತು, ಹನ್ನೊಂದು, ಹನ್ನೆರಡು.

ಮಧ್ಯರಾತ್ರಿ!

ಎಲ್ಲಿಯೂ ಸದ್ದಿನ ಸೊಲ್ಲಿಲ್ಲ. ಆಗಲೋ ಈಗಲೋ ಒಮ್ಮೊಮ್ಮೆ ನಾಯಿಗಳು ಬೊಗಳುವುದು ಕೇಳಿಸುತ್ತಿದೆ. ಅದು ಬಿಟ್ಟರೆ ಎಲ್ಲಿಂದ ಎಲ್ಲಿಯವರೆಗೂ ನಿಶ್ಶಬ್ದ–ನೀರವ–ನಿಸ್ಪಂದ.

ಮೋಹಿನಿ ದೀರ್ಘವಾದ ನಿಟ್ಟುಸಿರು ಬಿಟ್ಟು ಎದ್ದು ಕುಳಿತಳು. ಅರ್ಧ ಚಂದ್ರಮನ ಕದ್ದಿಂಗಳ ವಾರಾಶಿ. ಕಿಟಕಿಯಲ್ಲಿ ಹರಿದ ದೃಷ್ಟಿಗೆ ಹೊರ ಜಗತ್ತಿನ ದೃಶ್ಯ ಅಸ್ಪಷ್ಟ–ಅದೃಶ್ಯ. ಮೋಹಿನಿ ಹಾಗೇ ನೋಡುತ್ತಲೇ ಇದ್ದಾಳೆ. ಮನಃ ಬುದ್ಧಿಗಳಿಗೆ ಈಗೀಗ ನಿದ್ದೆಯ ಮಂಪರ ಮುತ್ತಲಾರಂಭಿಸಿದೆ. ಇನ್ನೇನು ಮಲಗಬೇಕು. ಅಷ್ಟರಲ್ಲಿ ಬೇಲಿಯಿಂದಾಚೆ ಯಾರೋ ಸರಿದಾಡಿದಂತಾಯಿತು. ತಕ್ಷಣ ನಿದ್ದೆಯ ಮಂಪರ ಹರಿದು ಜಾಗೃತವಾಯಿತು ಚಿತ್ತ. ಮೆಲ್ಲನೆ ಕಿಟಕಿಯಿಂದ ಹಿಂದೆ ಹಿಂದೆ ಸರಿದಂತೆ ಭಯ ಭೀತಿಯ ಗಾವರ ಮನಃಪ್ರಾಣಗಳನ್ನು ಆವರಿಸಿತು. ಅತ್ತಲೇ ಎವೆಯಿಕ್ಕದೆ ನೋಡಿತು ದೃಷ್ಟಿ. ಯಾರೋ ಬೇಲಿಯನ್ನು ದಾಟಿ ಕಿಟಕಿಗೆದುರಾಗಿ ನಿಂತುದು ಸ್ಪಷ್ಟಕಂಡಿತು.

ಮೋಹಿನಿ ತಕ್ಷಣ ಕುಸಿದು ಕುಳಿತಳು.

ಅವನು ಕಿಟಕಿಯನ್ನು ತಟ್ಟಿ ಮೆಲ್ಲಮೆಲ್ಲನೆ ಸದ್ದು ಮಾಡಿದ.

"..............."

ಮತ್ತೆ ಮತ್ತೆ ಪುನಃ ಪುನಃ ತಟ್ಟುವ ಸಣ್ಣ ಸದ್ದು ಮುಂದುವರಿಯಿತು. ಏನು ಗತಿ?

ಮೋಹಿನಿ ಗಡ ಗಡ ನಡುಗಿದಳು. ಕೊಠಡಿಯ ಬಾಗಿಲು ಅಷ್ಟೇನೂ ಗಟ್ಟಿಯಿಲ್ಲ. ಕಿಟಕಿಯೂ ಅಷ್ಟೆ. ಅಡಿಗೆ ಮನೆಯೊಳಗೆ ಸೇರಿಕೊಂಡರೆ ಒಳ್ಳೆಯದು. ಅದರ ಬಾಗಿಲು ಭದ್ರ. ಆದರೆ, ಮಕ್ಕಳನ್ನು ಏಳಿಸುವುದು ಹೇಗೆ? ಕಿಟಕಿಯ ಎದುರಿಗೇ ನಿಂತಿದ್ದಾನೆ ಧೂರ್ತ. ಅಯ್ಯೊ, ದೇವರೇ! ನೀನೇ ಕಾಪಾಡು! ಮೊರೆಯಿಟ್ಟಿತು ಜೀವ....ತಲ್ಲಣಿಸಿತು ಮನಸ್ಸು....ತವತವಿಸಿತು ಹೃದಯ. ಮೆಲ್ಲಮೆಲ್ಲನೆ ನಡುಗುವ ಕೈಗಳಿಂದ ಸಕ್ಕೂವನ್ನು ಅಲ್ಲಾಡಿಸಿದಳು....ಯಾವ ದೇವರ ವರವೋ ಅವಳಿಗೆ ಬೇಗನೆ ಎಚ್ಚರವಾಯಿತು. 'ಆಂ' ಎಂದಳು ಕಣ್ಣುಗಳನ್ನು ಬಿರಿಬಿರಿ ಬಿಟ್ಟು. ಅವಳ ಕಿವಿಯ ಹತ್ತಿರ ಬಾಗಿ "ಸಕ್ಕೂ ಕಳ್ಳ ಬಂದಿದ್ದಾನೆ. ಕಿಟಕಿಯ ಕಡೆ ನೋಡು! ಕಿಟಕಿ ತಟ್ಟುತ್ತಿದ್ದಾನೆ!"

"ಅಮ್ಮಾ" ಚೀರುವುದರೊಳಗಾಗಿ ಬಾಯಿ ಮುಚ್ಚಿ ಹಿಡಿದ ತಾಯಿ "ಹುಷ್! ಸದ್ದು ಮಾಡಬೇಡ. ನಾವೀಗ ಅಡಿಗೆ ಮನೆಯೊಳಗೆ ಸೇರಿಕೊಳ್ಳೋಣ. ಅದರ ಬಾಗಿಲು ಭದ್ರವಾಗಿದೆ. ಮಕ್ಕಳನ್ನು ಎತ್ತಿಕೊಳ್ಳಬೇಕು" ಎಂದಳು ಕಂಪಿಸುವ ದನಿಯಲ್ಲಿ.

ಕೂಡಲೇ ಹೊದ್ದಿಕೆ ತಳ್ಳಿ ಎದ್ದ ಸಕ್ಕೂ ಕಿಟಕಿಯ ಕಡೆ ದೃಷ್ಟಿ ಹರಿಸಿ ಬಿರಿಬಿರಿ ನೋಡಿದಳು. ಕಪ್ಪನೆಯ ಆಕೃತಿ ಕಿಟಕಿಯ ಮಬ್ಬು ಬೆಳಕಿನಲ್ಲಿ! ಮೆಲ್ಲನೆ ಸದ್ದು ಮಾಡದೆ ನೀನಾಳನ್ನು ಇಬ್ಬರೂ ಎತ್ತಿ ಒಳಗಡೆ ನೆಲದ ಮೇಲೆ ಉರುಳಿಸಿ ಮೀನಾಳನ್ನು ಎತ್ತಿಕೊಳ್ಳುವುದರಲ್ಲಿಯೇ ಅವನು ಕಿಟಕಿ ಕದ ಮುರಿದುಬಿಟ್ಟಿದ್ದ. ತಕ್ಷಣ ಇಬ್ಬರೂ ಹೆದರಿ ಒಳಗೆ ಸೇರಿಕೊಂಡರು! ಮೀನಾ ಹೊರಗಡೆ ಉಳಿದಳು. ಇನ್ನೇನು ಗತಿ?

ಅದೇ ವೇಳೆಗೆ ಹಿಂದುಗಡೆ ಮನೆಯವರು ಯಾವ ಕಾರಣವೋ ದೀಪ ಹಚ್ಚಿದರು.

"ಲಕ್ಷ್ಮಕ್ಕಾ! ಲಕ್ಷ್ಮಕ್ಕಾ!'.... ಮುಂದೆ ಮಾತೇ ಹೊರಡದಷ್ಟು ಗಾವರ.

ಕಿಟಕಿಯಲ್ಲಿ ಮೊಗವಿಟ್ಟ ಆ ಮನೆಯೊಡತಿ "ಏನು ಮೋಹಿನಿ !" ಎಂದಳು ಅಲ್ಲಿಂದಲೇ.

"ಕಳ್ಳಾ....! ಕಳ್ಳಾ....! ಎಲ್ಲಾ....ಪೋಲಿಸಣ್ಣನವರನ್ನು ಕರೆಯಿರಿ....ನಮ್ಮ ಕಿಟಕಿ....ಮುರಿದುಬಿಟ್ಟ ! ಕಳ್ಳಾ....!ಕಳ್ಳಾ....!! ಮೀನಾ ಹೊರಗಡೆ ಸಿಕ್ಕಿದ್ದಾಳೆ!"

ಮೋಹಿನಿ ಸಕ್ಕೂ ಒಂದೇ ಸಮನೆ ಕೂಗಿಕೊಂಡರು!

ಅಲ್ಲಿಂದ ಲಕ್ಷ್ಮಿಯೂ ಕೂಗಿಕೊಂಡಳು! ಅಕ್ಕಪಕ್ಕದವರು ದಡಬಡಿಸಿ ಎದ್ದರು. ಆ ವೇಳೆಗೆ ಮೀನಾ ಎಚ್ಚರಗೊಂಡು ಚಿಟಾರನೆ ಚೀರಿಕೊಂಡಳು. ಎರಡು ಮೂರು ಮನೆಯವರು ಎದ್ದು ಓಡಿಬಂದರು. ಕೂಡಲೇ ಕಿಟಕಿಯ ಬಳಿಯಿಂದ ಕಳ್ಳ ಎದ್ದುಬಿದ್ದು ಓಡತೊಡಗಿದ. ಯಾರೋ ಹಿಂದಿನಿಂದ ಅಂಗಿ ಹಿಡಿದರು. ಆದರೂ, ಅವನು ಕೊಸರಾಡಿ ತಪ್ಪಿಸಿಕೊಂಡ...ಕತ್ತಲೆಯಲ್ಲಿ ಹುಡುಕಾಡಿ ಸಿಗದೆ ಹೋದಾಗ ಪೋಲೀಸರು ಮೋಹಿನಿಯ ಮನೆಗೆ ಬಂದರು.

ಹೆದರಿ ಗಾರಾದ ಮೀನಾ ಗೋಳಾಡಿ ಅಳುತ್ತಲೇ ಇದ್ದಾಳೆ. ಎಷ್ಟು ಸಮಾಧಾನಿಸಿದರೂ ಅವಳ ದುಃಖಹೋಗದು.

"ನೀವಿಬ್ಬರೂ ಒಳಸೇರಿ ನನ್ನ ಹೊರಬಿಟ್ಟಿರಲ್ಲಾ?"

"ಅಷ್ಟರೊಳಗಾಗಿ ಅವನು ಕಿಟಕಿ ಮುರಿದುಬಿಟ್ಟ!"

"ಆದರೂ..!"

"ಊ ಊ ಊ...." ಎಂದು ಅಳುತ್ತಲೇ ಇದ್ದಾಳೆ ಮೀನಾ, ಮಗಳನ್ನು ತಬ್ಬಿದಳು ತಾಯಿ.

ಮೋಹಿನಿ ಮತ್ತೂ ಸಕ್ಕೂರವರ ಕಣ್ಣುಗಳಲ್ಲೂ ಬಳ ಬಳ ನೀರು. ತಲೆಬಾಗಿಲಿಗೆ ಬಂದ ಪೋಲೀಸರಿಗೆ ಬಾಗಿಲು ತೆರೆದಳು ಮೋಹಿನಿ. ಚಂದ್ರಿ ಲಕ್ಷ್ಮಿಯರೂ ಒಳಬಂದರು.

ಪೋಲೀಸ್ ಶ್ಯಾಂ ಉದ್ವೇಗಭರಿತ ಕಂಠದಿಂದ ಬಿತ್ತರಿಸಿದ. "ಕದ್ದಿಂಗಳು, ಸರಿಯಾಗಿ ಗೊತ್ತಾಗಲಿಲ್ಲ. ಅವನನ್ನು ನೋಡಿದರೆ ಸಬ್ ಇನ್ಸ್‌ಪೆಕ್ಟರ್ ಮಲ್ಲಾರಿ ಇದ್ದಂತಿತ್ತು!"

"ಮೊದಲು ಏನಾಯಿತು? ನೇರವಾಗಿ ಕಿಟಕಿ ಮುರಿದನೇ?" ಕೇಳಿದ ರಂಗಸ್ವಾಮಿ.

"ನಾನು ಎಚ್ಚರವಾಗಿಯೇ ಇದ್ದೆ. ಚರ್ಚ್ ಗಂಟೆ ಹನ್ನೆರಡು ಬಾರಿಸಿದಾಗಲೇ ಬೇಲಿಯ ಬಳಿಯಲ್ಲಿ ಅಡ್ಡಾಡಿದುದು ಕಂಡಿತು. ನಾನು ಕಿಟಕಿಯಲ್ಲಿ ನೋಡುತ್ತಲೇ ಇದ್ದೆ. ಅವನು ನೇರವಾಗಿ ಕಿಟಕಿಗೆ ಬರುತ್ತಲೂ ನಾನು ಕಾಣಿಸದಂತೆ ಕುಳಿತುಬಿಟ್ಟೆ. ಅವನು ಕಿಟಕಿಯನ್ನು ಮೆಲ್ಲನೆ ತಟ್ಟತೊಡಗಿದ. ಕಳ್ಳನಾದರೆ ಕಿಟಕಿ ತಟ್ಟುತ್ತಾನೆಯೇ?"

ಅದೇ ಪ್ರಶ್ನೆಯನ್ನು ಅನೇಕ ದನಿಗಳು ಕೇಳಿದುವು.

ಮೋಹಿನಿ ಗಡಗಡ ನಡುಗುತ್ತ ಚಂದ್ರಿಯನ್ನು ತಬ್ಬಿಕೊಂಡಳು.

ಮೋಹಿನಿಯ ದೀನಾತಿದೀನ ಸ್ಥಿತಿಯನ್ನು ನೋಡಿ ಎಲ್ಲರ ಹೃತ್ಕರಂಡವೂ ದ್ರವೀಭೂತವಾಯಿತು. ಅಷ್ಟೇ ಅಲ್ಲ; ಎಲ್ಲರಿಗೂ ಆಶ್ಚರ್ಯ; ಪರಮಾಶ್ಚರ್ಯ ಯಾರಿರಬಹುದು?

"ಖಂಡಿತ ಅವನು ಕಳ್ಳ ಅಲ್ಲವೇ ಅಲ್ಲ! ಯಾವನೇ ಇರಲಿ ದುರುದ್ದೇಶ ದಿಂದ ಬಂದವನು!"

ಆ ಮಾತು ಕೇಳಿ ಮತ್ತೊಮ್ಮೆ ಗಡಗಡ ನಡುಗಿಹೋದಳು ಮೋಹಿನಿ. ಕಣ್ಣುಗಳಲ್ಲಿ ಕಂಬನಿಗಳುಕ್ಕಿದುವು.

"ಅವನು ಸ್ವಲ್ಪದರಲ್ಲಿ ತಪ್ಪಿಸಿಕೊಂಡ. ಸಿಕ್ಕಿದರೆ ಗತಿ ಮುಗಿಸುತ್ತಿದ್ದೆ! ಸಬ್ ಇನ್ಸ್‌ಪೆಕ್ಟರ್ ಮಲ್ಲಾರಿಗೆ ಕೆಟ್ಟ ಚಾಳಿ ಇದೆ. ನೀನು ಹೇಳಿದಂತೆ ಅವನೇ ಇದ್ದರೂ ಇರಬಹುದು!"

"ಛೇಃ! ಛೇಃ! ಹಿಡಿಯಬೇಕಿತ್ತು! ಸಿಕ್ಕಿದ್ದರೆ ಊರೆಲ್ಲಾ ಮೆರವಣಿಗೆ ಮಾಡಿಸಬಹುದಿತ್ತು!"

"ಅವನ ಅದೃಷ್ಟ ಚೆನ್ನಾಗಿತ್ತು ಬಿಡು!"

"ಬೆಳಿಗ್ಗೆ ನಾನು ಸೀದಾ ಅವನ ಮನೆಗೇ ಹೋಗಿ ನಮ್ಮ ಕೇರಿಗೆ ಕಳ್ಳ ಬಂದಿದ್ದ ಎಂದು ದೂರು ಹೇಳುವೆ. ಆಗ ಅವನ ಮುಖಭಾವ ನೋಡಿ ಊಹಿಸಬಹುದು. ಏನು ಹೇಳುತ್ತಾನೆ–ಹೇಗಿರುತ್ತಾನೆ ಎಂಬುದು ಮುಖ್ಯ."

"ಸರಿ; ಸರಿ. ಅವನು ಮನೆಯಲ್ಲಿ ಇದ್ದಾನೋ ಇಲ್ಲವೋ ಎಲ್ಲಾ ತಿಳಿಯುತ್ತದೆ. ಪರೀಕ್ಷಿಸಬಹುದು ಕೂಡ."

"ಹೌದು....ಹಾಗೇ ಮಾಡೋಣ."

ಒಳಬಂದು ಕಿಟಕಿ ಬಾಗಿಲು ನೋಡಿದರೆ ಒಂದು ಬಾಗಿಲು ಮುರಿದು ಹೋಗಿತ್ತು. ತಂತಿ ಜಾಲರಿಯ ಬಾಗಿಲು. ಕಿಟಕಿಗೆ ಕಬ್ಬಿಣದ ಸರಳಿಲ್ಲ. ಅಂದಮೇಲೆ ಮುರಿದು ಒಳಬರುವುದು ಸುಲಭ....ಈ ದಿನವೇ ದುರಸ್ತಿ ಮಾಡಿಸಬೇಕು. ಇಲ್ಲದಿದ್ದರೆ ಇಲ್ಲಿ ಮಲಗುವುದು ಅಪಾಯ....

"ಅಣ್ಣಂದಿರಾ! ಇಂದೇ ಏನಾದರೂ ಮಾಡಿಸಿದರೆ ಮೋಹಿನಿಗೆ ಉಪಕಾರ ವಾಗುತ್ತೆ" ಎಂದಳು ಲಕ್ಷ್ಮಿ ಕಳಕಳಿ ತುಂಬಿದ ದನಿಯಲ್ಲಿ.

ಮೋಹಿನಿಗೆ ಬಂದವನು ಸಬ್ ಇನ್ಸ್‌ಪೆಕ್ಟರ್ ಎಂದಾಗ "ಇದ್ದರೂ ಇರಬಹುದೇನೋ" ಎಂಬ ಭಾವನೆ ಮನದಲ್ಲಿ. ಅಂದಿನ ಅವನ ಲಜ್ಜಾಹೀನ ವರ್ತನೆ ಅಕ್ಷಿಪಟಲದ ಮೇಲೆ ನಲಿದಾಡಿ ಕಣ್ಣುಗಳಲ್ಲಿ ಕಂಬನಿ ಮೊಳೆತುವು. ಹೃದಯ ಈಗಲೀಗ ಬಿರಿಯುವಂತೆ ವ್ಯಾಪ್ತಿಗೆ ಮೀರಿ ಮಿಡಿಯತೊಡಗಿತು. ದಡ. ದಡ. ದಡ. ದಡ.

ಎಲ್ಲರೂ ಸಂತೈಸಿ ಅಡಿಗೆ ಮನೆಯಲ್ಲೇ ಮಲಗಿಕೊಳ್ಳಲು ಹೇಳಿ ಹೊರಟರು. ಶ್ಯಾಂ ಅದನ್ನು ಅಂದೇ ರಿಪೇರಿ ಮಾಡಿಸಿ ಕೊಡುವುದಾಗಿ ತಿಳಿಸಿ ಧೈರ್ಯ ಹೇಳಿದ. ಮೋಹಿನಿ ಎಲ್ಲರಿಗೂ ವಂದಿಸಿ ಮುಂಬಾಗಿಲನ್ನು ಮುಚ್ಚಿಕೊಂಡು ಅಡಿಗೆ ಮನೆಗೆ ಬಂದಳು. ಅಲ್ಲಿ ನಾಲ್ವರು ಮಲಗುವುದು ಕಷ್ಟವೇ. ಇಕ್ಕಟ್ಟಿನ ತಾಣ. ಪಾತ್ರೆಪಗಡಿಗಳು ಬೇರೆ. ಅದನ್ನೆಲ್ಲಾ ಬದಿಗೊತ್ತಿ ಹಾಸಿಗೆ ಹಾಸಿದರೆ ನಿದ್ದೆ ಬರಬೇಕೆ? ತಲೆಯಲ್ಲಿ ಆನೆಗಳು ಹೊಕ್ಕಷ್ಟು ಗೊಂದಲ. ತಂಗಾಳಿ ಸುಳಿದರೂ, ಎಲ್ಲೋ ಕಟಕ್ ಎಂದು ಸದ್ದಾದರೂ ಯಾರೋ ಬಾಗಿಲು ತಟ್ಟುತ್ತಿದ್ದಂತೆ ಕೇಳಿಸಿ ಎದೆ ದಡಗುಟ್ಟುತ್ತದೆ.... ಮನಸ್ಸು ಮಿಲಿಮಿಲಿಗೊಳ್ಳುತ್ತದೆ.

ಮೋಹಿನೀ ಮಾನಸಿಕ ಹಿಂಸೆಯಿಂದ ತತ್ತರಿಸಿದಳು. ಸಾಕಪ್ಪಾ....ಸಾಕು! ಈ ಜೀವನ, ಎದೆಯಾಳದಿಂದ ಅಂತರ್ವಾಣಿ ಚೀರಿತು. ದೇಹದಾದ್ಯಂತ ಕಂಪನದ ಝರಿ ಜಿಲ್ಲನೆ ಹರಿದಾಡಿತು.

ಯಾಕೋ, ಏನೋ ನೆರೆಮನೆಯ ನಾಯಿ ದೊಡ್ಡ ದನಿಯಲ್ಲಿ ಗಂಟಲು ಹರಿಯುವಂತೆ ಬೊಗಳುತ್ತಿದೆ....ಕಳ್ಳ ಬಂದಾಗ ಎಲ್ಲಿ ಹೋಗಿತ್ತು ಅದು? ಆಗ ಸದ್ದೇ ಇರಲಿಲ್ಲವಲ್ಲಾ, ಮತ್ತಾರಾದರೂ ಕಳ್ಳರು ಬಂದರೇ, ಹೇಗೆ? ಎಷ್ಟೆಷ್ಟು ಪ್ರಯತ್ನಿಸಿದರೂ ಮನಸ್ಸೂಚಿ ದಕ್ಷಿಣಾಮುಖಿಯಂತೆ ಸರ್ರನೆ ಬಂದು ನಿಲ್ಲುವುದೇ ಅಲ್ಲಿ.

ಮತಿವಂತನಾದ ಮನುಷ್ಯ ದುರ್ವಿಧಿಯೊಡನೆ ಸಂಧಿ ಮಾಡುತ್ತಾನೇಕೆ? ಇದು ಬಗೆಹರಿಯದ ಪ್ರಶ್ನೆ. ಈ ಸರಿರಾತ್ರಿಯಲ್ಲಿ ಕಿಟಕಿ ತಟ್ಟಬೇಕಾದರೆ ಅವನಿಗೆಷ್ಟು ಧೈರ್ಯ? ಅದೂ ಕೂಡ ಪೋಲೀಸ್ ಕಾಲೋನಿಯಲ್ಲಿ!

ನೀನಾ–ಮೀನಾ ತಾಯಿಯನ್ನು ತಬ್ಬಿಯೇ ಮಲಗಿದ್ದಾರೆ. ಸಕ್ಕೂಗೂ ತಾಯಿಗೆ ಮೈಹಚ್ಚಿಯೇ ಮಲಗುವ ಇಷ್ಟ. ಸ್ವಲ್ಪ ದೂರವಾದೆ ಎಂಬ ಭಯ. ನೀನಳ ಮೇಲೆಯೇ ಕೈಚಾಚಿ ತಾಯಿಯನ್ನು ತಬ್ಬಿ ಹಿಡಿದು "ಅಮ್ಮಾ ಭಯವಾಗುತ್ತೆ" ಎಂದರೆ, ನೀನಾ ಮೀನಾಳದೂ ಅದೇ ಹಾಡು.

"ದೀಪ ನಂದಿಸುವುದಿಲ್ಲ. ನೀವು ನಿದ್ದೆ ಮಾಡಿ. ಅಡಿಗೆ ಮನೆಯ ಕಿಟಕಿ, ಬಾಗಿಲು ಎರಡೂ ಭದ್ರವಾಗಿವೆ" ಎಂದು ಮಕ್ಕಳನ್ನು ಸಂತೈಸಿದಳು ಮೋಹಿನಿ. ಹಾಗೆಂದು ಸಂತೈಸಿದರೂ ತನ್ನ ಮನಕ್ಕೆ ಸಾಂತ್ವನ ನೀಡುವುದು ಕಷ್ಟವೇ....ಒಮ್ಮೆ ಬೆಳಗಾದರೆ ಸಾಕು ಎಂದು ಹಾರೈಸಿತು ಜೀವ. ಕಿವಿಯ ಸನಿಹದಲ್ಲಿಯೇ ಅಶರೀರವಾಣಿಯ ಮೊಳಗು....Be Brave....weep no more.

## ೨೩

ರಘುನಾಥನ ಮಗಳ ಮದುವೆ ಆಯಿತು. ಅತ್ಯಂತ ಅದ್ದೂರಿಯಿಂದ ನಡೆಯಬೇಕಾದ ಮದುವೆ ಶೀತಲ ಯುದ್ಧದಿಂದ–ಮನಸ್ಸಿನ ತೀವ್ರ ಆಘಾತದಿಂದ–ದುಃಖ ದುಮ್ಮಾನಗಳಿಂದ ಸಂಕ್ಷಿಪ್ತವಾಗಿ ನಡೆದುಹೋಯಿತು. ಮದುವೆ ಮಾಡಿದ ರಘುನಾಥನ ಮನಸ್ಸು ಕಿಂಚಿತ್ ಹಗುರವಾಯಿತು. ದಂಪತಿಗಳು ಕನ್ಯಾದಾನ ಮಾಡಿ ಏಳೇಳು ಜನ್ಮಗಳ ಪುಣ್ಯ ಪಡೆದುಕೊಂಡರು.

ಕುಲಪುತ್ರರು ಜೇಲಿನ ಕತ್ತಲ ಕೋಣೆಯಲ್ಲಿ. ಮಗಳ ಮದುವೆ ಮನೆಯಲ್ಲಿ

ಬಂಧುಗಳ ಬಿಸುಸುಯ್ಲು ಎದೆಯಲ್ಲಿ. ಹೆತ್ತವರು ಕಣ್ಣೀರ ಕಡಲಲ್ಲಿ. ಆದರೂ ಸಾಧ್ಯವಾದಷ್ಟು ಗುಟ್ಟಾಗಿ ಉಳಿಯಿತು. ಕುಲಪುತ್ರರ ಅಪರಾಧ.

* * *

ಸುಮನಾ ಒಳ ಬಂದವಳೇ "ಮೋಹಿನೀ! ಅಂತೂ ನಿನ್ನ ಅಣ್ಣನ ಮಗಳ ಮದುವೆ ಆಯಿತು; ನಡೆಯಬೇಕಾದ ರೀತಿಯಲ್ಲಿ ಮಾತ್ರ ನಡೆಯಲಿಲ್ಲ" ಎಂದಳು.

"ನೀನು ಹೋಗಿದ್ದೆಯಾ?"

"ಹೋಗಿದ್ದೆ; ಶಾಸ್ತ್ರೋಚಿತವಾಗಿ! ಅಲ್ಲ, ಅಲ್ಲವೇ ಅಲ್ಲ. ಪ್ರತ್ಯಕ್ಷ ದರ್ಶನಕ್ಕಾಗಿ!"

ಇಬ್ಬರ ತುಟಿಗಳಲ್ಲೂ ತಿರಸ್ಕಾರದ ಸಣ್ಣನಗೆ ಅರಳಿ ಮಾಯವಾಯಿತು.

ಸುಮನಾ ಒಳಬಂದು ಕುಳಿತುಕೊಂಡಳು. ಇಬ್ಬರ ಮುಖದಲ್ಲೂ ಕಳೆಯಿಲ್ಲ. ಏನೋ ಒಂದು ರೀತಿಯ ಜುಗುಪ್ಸೆ, ಇನ್ನೇನೋ ಒಂದು ರೀತಿಯ ಅಶಾಂತಿ, ಮತ್ತೇನೋ ಒಂದು ರೀತಿಯ ಅಸಮಾಧಾನಗಳ ನೆಲೆ ಆಂತರಂಗಿಕ ಕ್ಷೇತ್ರ. ಚಿಂತೆ–ಚಿಂತೆ. ಪ್ರಯತ್ನಿಸಿದರೂ ಬದಿಗೊತ್ತಲಾರದ ಚಿಂತೆ.

"ಸುಮನಾ! ನಾನು ಈ ಕಾಲೋನಿಯನ್ನು ಎಷ್ಟು ಬೇಗ ಬಿಟ್ಟರೆ ಅಷ್ಟು ಒಳ್ಳೆಯದು. ಬೇಕರಿ ಯಜಮಾನರು ಮನೆಯ ವಿಳಾಸ ಕೊಟ್ಟಿದ್ದಾರೆ. ನೀನು ಹೇಗೂ ಬಂದಿದ್ದೀಯೆ ಹೋಗಿ ನೋಡಿಕೊಂಡು ಬರೋಣ. ಔಟ್‌ಹೌಸ್ ಇರುವುದರಿಂದ ಅಲ್ಲೇ ನಾವು ವಾಸಮಾಡಬಹುದು. ರಿಪೇರಿ ತುಂಬಾ ಬೀಳ ಬಹುದು ಎನಿಸುತ್ತೆ. ರಾಯರ ಸಾಲ ಇನ್ನೂ ತೀರಲಿಲ್ಲ....ಚಿಂತೆಗಳು ಒಂದೆರಡಲ್ಲ. ನಾನು ಶಾಲೆ ನಡೆಸಬೇಕೆಂದರೆ 'ಟೀಚರ್ ಟ್ರೈನಿಂಗ್' ತೆಗೆದುಕೊಳ್ಳಬೇಕಾದುದು ನಿಯಮ. ಪೋಸ್ಟಲ್ ಟ್ಯೂಷನ್ನಿಗೆ ಬರೆದುಕೊಂಡಿರುವೆ. ಬಿಡುವು ಲವಲೇಶವೂ ಇಲ್ಲ. ಹೇಗೆ ನಿಭಾಯಿಸುವೆನೋ ತಿಳಿಯದು...."

"ದೇವರಿದ್ದಾನೆ ದೀನರ ಪಾಲಿಗೆ."

"ನಮ್ಮ ಪಾಲಿಗೆ ಮಾತ್ರ ಇಲ್ಲವೇನೋ...."

"ಇದ್ದಾನೆ....ಬಿಡು. ಅವನು ಯಾವತ್ತೂ ಪರೋಕ್ಷವೇ."

ಅದೇ ತಾನೇ ಬಾಲವಾಡಿ ಮುಗಿದಿತ್ತು. ಚೆಲ್ಲಾಪಿಲ್ಲಿಯಾಗಿದ್ದ ವಸ್ತುಗಳನ್ನು ಜೋಡಿಸಿಟ್ಟು, ಗೆಳತಿಗೆ ಕಿಟಕಿ ರಿಪೇರಿ ಮಾಡಿಸಬೇಕಾಗಿ ಬಂದ ಬಗೆಯನ್ನು ವಿವರಿಸಿ "ನಾವು ಮರ್ಯಾದೆಯಿಂದ ಬಾಳುವ ಕಷ್ಟ ದೇವರಿಗೇ ಗೊತ್ತು!" ಎಂದು ಕಣ್ಣೀರು ಮಿಡಿದಳು.

"ಹೋಗಲಿ ದೇವರು ಪಾರು ಮಾಡಿದನಲ್ಲಾ, ಅದೇ ಸಾಕು."

"ಮೂವರು ಹೆಣ್ಣು ಮಕ್ಕಳಿಗಾಗಿ ಈ ಬದುಕು. ಇಲ್ಲವಾದರೆ ಈ ಬದುಕಾದರೂ ಏಕೆ ಬೇಕು. ಶಾಂತಿ ಸಮಾಧಾನಗಳಿಲ್ಲದ ಮೇಲೆ ಬದುಕುವುದು ಪ್ರಯೋಜನವಿಲ್ಲ." ದುಃಖಗದ್ಗದಿತ ದನಿ ಎದೆಯಾಳದಿಂದ ಹೊರಬಿತ್ತು.

"ಈ ಪ್ರಪಂಚದಲ್ಲಿ ಶಾಂತಿ ಸಮಾಧಾನ ಎಷ್ಟು ಮಂದಿಗಿರುತ್ತೆ? ಮರ್ಯಾದೆ ಬಿಟ್ಟವರಿಗೆ ಸಂತೃಪ್ತಿ....ನಮ್ಮಂತಹವರಿಗೆ ಎಲ್ಲಿಂದ ಬರಬೇಕು ಸಂತೃಪ್ತಿ?"

"ನಿಜವೇ...."

"................."

"ಈ ಜಗತ್ತಿನಲ್ಲಿ ಪರಮತ್ಯಾಗಿಗಳಲ್ಲದೆ ಮತ್ತಾರೂ ಪೂರ್ಣ ಸಂತೋಷಿ ಗಳಲ್ಲ; ನನಗೂ ಗೊತ್ತು. ಪರಮಾತ್ಮ ಈ ಮನಸ್ಸೊಂದನ್ನು ಕೊಡಬಾರದಿತ್ತು."

ಇಬ್ಬರೂ ಹೊರಟರು ರಾಯರ ಮನೆಯ ಕಡೆಗೆ. ಹಾದಿ ತೀವ್ರಗತಿಯಲ್ಲಿ ಸಾಗಿತು. ಆ ಮನೆ ಅಂತಹ ದೂರವೇನಲ್ಲ. ಆ ಮನೆ ಅಂತಹ ದೂರವೇನಲ್ಲ. ಬೇಕರಿಗೂ ಹತ್ತಿರವೇ. ಮನೆ ಇನ್ನೇನು ಖಾಲಿಯಾಗಲಿದೆ. ಹಳೆಯ ಮನೆ; ಸುತ್ತು ಮುತ್ತೂ ವಿಶಾಲವಾದ ಜಾಗ. ಹಿಂಬದಿಯಲ್ಲಿ ಸಾಲಾಗಿ ನಾಲ್ಕು ಕೊಠಡಿಗಳು. ಮನೆಯ ಒಳಗಡೆ ಹೆಚ್ಚಿನ ದುರಸ್ತಿ ಇರಲಿಲ್ಲ. ಔಟ್ ಹೌಸಿನ ರಿಪೇರಿ ಮಾಡಿ ಕೊಂಡರೆ ಎರಡು ಪುಟ್ಟ ಸಂಸಾರಗಳಿಗೆ ಸುಖವಾದ ಆಶ್ರಯ ನೀಡಬಲ್ಲದು.... ಇಬ್ಬರಿಗೂ ಅದರಿಂದ ಎಷ್ಟೋ ಸಮಾಧಾನ.

"ಇನ್ನು ನನ್ನ ಸಂಸಾರ ಇಲ್ಲೇ!" ಎಂದಳು ಸುಮನಾ.

ಇಬ್ಬರೂ ಅಲ್ಲಿಂದ ಬೇಕರಿಗೆ ಹೋಗಿ ಯಜಮಾನರನ್ನು ಕಂಡರು.

"ಏನಮ್ಮಾ ಮೋಹಿನಿ?"

"ನಿಮ್ಮ ಮನೆ ನೋಡಿಕೊಂಡು ಬಂದೆ. ತುಂಬಾ ಚೆನ್ನಾಗಿದೆ. ಔಟ್‌ಹೌಸ್ ರಿಪೇರಿ ಮಾಡಿಸಿಕೊಂಡರೆ ಮುಂದಿನ ರಜೆದಿನಗಳಲ್ಲಿ ಉಳಿದ ರಿಪೇರಿ ಮಾಡಿಸಿ ಕೊಳ್ಳಬಹುದು."

"ಸರಿ....ಔಟ್‌ಹೌಸ್ ರಿಪೇರಿಗೆ ನಿನ್ನಲ್ಲಿ ಹಣ ಇದೆಯೇ?"

"ಸ್ವಲ್ಪ ಇದೆ. ಇವಳು ನನ್ನ ಗೆಳತಿ ಸುಮನಾ. ಟೀಚರ್ ಕೆಲಸ ಮಾಡು ತಿದ್ದಾಳೆ. ಮುಂದೆ ಇವಳೂ ನನ್ನೊಂದಿಗೇ ಇರುವುದರಿಂದ ತಾನೂ ಸ್ವಲ್ಪ ಖರ್ಚು ಮಾಡುತ್ತಾಳೆ."

ರಾಯರು ಸುಮ್ಮನೆ ತಲೆದೂಗಿದರು.

ಸುಮನಳ ಸಂಕಷ್ಟದ ಚರಿತ್ರೆಯನ್ನು ಬಿಡಿಸಿ ಹೇಳಿ "ಅದು ಸಿಗುವುದರಿಂದ ಇಬ್ಬರಿಗೂ ಅನುಕೂಲ. ನಿಮ್ಮ ಉಪಕಾರವನ್ನು ಎಂದೂ ಮರೆಯುವಂತಿಲ್ಲ."

"ಆಗಲಮ್ಮಾ.........ಆಗಲಿ" ಎಂದ ಅವರು ಪುನಃ "ದೇವರು ನಿಮಗೆ ಒಳ್ಳೆಯದನ್ನು ಮಾಡಲಿ. ಹಿಡಿದ ಕೆಲಸವನ್ನು ಶ್ರದ್ಧೆಯಿಂದ ಮಾಡಿ."

ಆ ಮಾತಿಗೆ ಕೃತಜ್ಞತೆಯಿಂದ ವಂದನೆಯನ್ನರ್ಪಿಸಿ ಇಬ್ಬರೂ ಹೊರಬಿದ್ದಾಗ ರಾಯರು ಪುನಃ "ಮೋಹಿನಿ! ಇಲ್ಲಿರುವ ನಮ್ಮ ಮೇಸ್ತ್ರಿಗೆ ಹೇಳಿದರೆ ಅವನು ಕೆಲಸವನ್ನು ಚೆನ್ನಾಗಿ ಮತ್ತು ಕ್ಷಿಪ್ರವಾಗಿ ಮಾಡಿಕೊಡುವ" ಎಂದರು.

"ಆಗಲಿ ಸರ್!"

ಅದೇ ಪ್ರಕಾರವಾಗಿ ಅವರ ಮೇಸ್ತ್ರಿಯೊಂದಿಗೆ ಮಾತಾಡಿ ಮುಂದಿನ ಕೆಲಸಕ್ಕೆ ಏರ್ಪಾಡು ಮಾಡಿಕೊಂಡರು. ಮೆಟ್ಟಿಲಿಳಿದು ಬೇಕರಿಯ ಪ್ರಾಕಾರವನ್ನು ದಾಟಿದ ನಂತರ ಸುಮನಾ ಕೇಳಿದಳು.

"ಯಜಮಾನರೇನೋ ತುಂಬ ಧಾರಾಳಿ. ಅವರ ಮಕ್ಕಳು....?"

"ಅವರಿಗೆ ಗಂಡು ಮಕ್ಕಳಿಲ್ಲ. ಆರು ಮಂದಿ ಹೆಣ್ಣು ಮಕ್ಕಳು. ಇಬ್ಬರು ಮೊದಲ ಗಂಡಂದಿರನ್ನು ಬಿಟ್ಟು ಪುನರ್ವಿವಾಹವಾಗಿದ್ದಾರೆ. ಈ ಊರಿನಲ್ಲಿ ಯಾರೂ ಇಲ್ಲ. ಎಲ್ಲಾ ದೂರ ದೂರ ಇದ್ದಾರೆ. ಹೆಣ್ಣುಮಕ್ಕಳ ತಂದೆಯಾದುದರಿಂದ ಹೆಂಗಳೆಯರ ಕಷ್ಟಸುಖವನ್ನು ಅರಿತವರು. ದೇವರು ಒಳ್ಳೆಯ ಹೃದಯವನ್ನು ಕೊಟ್ಟಿದ್ದಾನೆ. ಮೇಲಾಗಿ, ಪಕ್ವವಾದ ಅನುಭವ....ಇನ್ನೇನು ಬೇಕು ಹೇಳು? ನಾನು ಕಾಲೇಜು ಯುವತಿಯಾಗಿದ್ದು ಮುಸುರೆ ತೊಳೆಯುವುದಕ್ಕೆ ಸೇರಿಕೊಂಡೆ ಎಂಬುದು ತಿಳಿದಾಗಿನಿಂದ ನನ್ನ ಮೇಲೆ ಅಪಾರವಾದ ಕರುಣೆ. ಬಹುಶಃ ದೇವರು ಇವರ ಮೂಲಕ ನನಗೆ ನೆರವು ನೀಡುತ್ತಿರಬಹುದು ಯಾರಿಗೆ ಗೊತ್ತು?"

"ನಿಜ ಮೋಹಿನಿ! ಭಗವಂತನ ನೆರವು ಯಾವತ್ತೂ ಪರೋಕ್ಷವೇ!"

ಆ ಮಾತಿಗೆ ಉತ್ತರಿಸಲಿಲ್ಲ ಮೋಹಿನಿ. ಭಕ್ತಿರಸ ಹೃದಯಕುಂಡಲಿಯಿಂದ ನರನಾಡಿಗಳಿಗೆ ತಟತಟನೆ ತೊಟ್ಟಿಕ್ಕಿತು....ಮನದಲ್ಲೇ "ದೇವರು ದೊಡ್ಡವನು" ಎಂದುಕೊಂಡಳು.

ಇಬ್ಬರೂ ಪೋಲೀಸ್ ಕಾಲೋನಿಯ ಆವರಣವನ್ನು ದಾಟಿದಾಗಲೇ ಮೂವರು ಮಕ್ಕಳೂ ಬಾಗಿಲಲ್ಲಿ ಕಾದಿದ್ದುದು ಕಂಡುಬಂತು. ಸಕ್ಕು ಈಗ ಸ್ಕೂಲ್ ಫೈನಲ್. ನೀನಾ ಮೀನಾ ಆರನೆಯ ತರಗತಿ. ಒಂದು ಕಾಲದಲ್ಲಿ ದೇಹಸ್ಥಿತಿ ಸುಧಾರಿಸದೆ ನಿಶ್ಶಕ್ತರಾಗಿದ್ದ ನೀನಾ-ಮೀನಾ ಈಗ ಮೈಕೈ ತುಂಬಿ ಕಣ್ಣಿಗೆ ಇಂಬಾಗುವಷ್ಟು ಆರೋಗ್ಯವಂತರಾಗಿದ್ದಾರೆ. ತಾಯಿಯ ಎತ್ತರಕ್ಕೆ ಬೆಳೆದ ಸಕ್ಕೂ ತಾಯಿ

ಯನ್ನು ಮೀರಿಸುವಂತಹ ಸಲ್ಲಕ್ಷಣವಂತೆ.

ಆ ಮಕ್ಕಳನ್ನು ನೋಡುತ್ತ "ಇದ್ದರೆ ಹೀಗಿರಬೇಕು" ಎಂದುಕೊಂಡಳು ಸುಮನಾ.

"ಅಮ್ಮಾ! ನಾವು ಶಶಿ–ಅಶೋಕರನ್ನು ಕೈಕೋಳ ಹಾಕಿ ಕೋರ್ಟಿಗೆ ಕರೆದೊಯ್ಯುತ್ತಿದ್ದುದನ್ನು ನೋಡಿದೆವು!!"

"ಅರೆ! ಅವರೇ ಎಂದು ನಿನಗೆ ಹೇಗೆ ಗೊತ್ತು?"

"ದಾರಿಗರು ಸಾಹುಕಾರ್ ರಘುನಾಥರ ಮಕ್ಕಳು ಎಂದು ಮಾತಾಡುತ್ತಿದ್ದರು! ನಮ್ಮ ಮಗ್ಗುಲಿನಿಂದಲೇ ನಡೆದುಹೋದರು!! ನಾವು ಏನೂ ತಿಳಿಯದವರಂತೆ ನೋಡಿಕೊಂಡು ಬಂದೆವು."

"ಛೇ! ಛೇ! ಮಾನಗೇಡು!"

ಮೋಹಿನಿಯ ಮುಖ ಮುದುಡಿಹೋಯಿತು.

ಎಲ್ಲರೂ ಕೈಕಾಲು ತೊಳೆದು ಮುಖಮಜ್ಜನ ಮಾಡಿದನಂತರ ಊಟದ ಹವಣಿಕೆ. ಸುಮನಾ ಅವರೊಂದಿಗೆ ಊಟದಲ್ಲಿ ಪಾಲ್ಗೊಂಡಳು. ಮೋಹಿನಿಯ ಮನದ ತುಂಬೆಲ್ಲಾ ಅಣ್ಣನ ಮನಸ್ಥಿತಿಯ ಚಿಂತನೆ....ಒಂದಾನೊಂದು ಕಾಲದಲ್ಲಿ ರಘು ಒಳ್ಳೆಯವನೇ ಆಗಿದ್ದ. ವಕ್ರಬುದ್ಧಿಯ ಅತ್ತಿಗೆ ಯಾವಾಗ ಬಂದಳೋ ಅಂದಿಗೇ ಮುಗಿಯಿತು ಆವನ ಮಾನವೀಯತೆ. ಕಾಮಪರವಶನಾದ ಅವನು ಜಗತ್ತನ್ನೇ ಮರೆತು ತಾನು ತನ್ನ ಬೆಲೆ ಎಲ್ಲವನ್ನೂ ಸರಸಿಯ ಚರಣಗಳಲ್ಲಿ ಸಮರ್ಪಿಸಿಬಿಟ್ಟ. ಅಂದಿಂದಿಗೂ ತನ್ನ ಒಳ್ಳೆಯತನವನ್ನು ಉಳಿಸಿಕೊಂಡು ಬಂದಿದ್ದರೆ ತನ್ನ ಮಕ್ಕಳೂ ತನ್ನಂತೆಯೇ ಇರುತಿದ್ದರೇನೋ....ತಾನೂ ಕೆಟ್ಟ. ಕುಲಗೋತ್ರವೂ ಕೆಟ್ಟಿತು....

"ಏನಮ್ಮಾ ಗಂಭೀರವಾಗಿಬಿಟ್ಟೆ!"

"ಅಣ್ಣ ಅತ್ತಿಗೆ ಮಾಡಿದ ಅನ್ಯಾಯವೇ ತಿರುಗುಬಾಣವಾಯಿತೋ ಏನೋ... ಎಂಬ ಯೋಚನೆ ಬಂತು ಅಷ್ಟೆ."

"ಇದ್ದರೂ ಇರಬಹುದು. ಅಥವಾ...." ಅಷ್ಟಕ್ಕೇ ಸುಮ್ಮನಾದಳು ಸುಮನಾ.

"ಏಕೆ ಅಷ್ಟಕ್ಕೇ ಮಾತು ನಿಲ್ಲಿಸಿದೆ?"

"ಯೋಚಿಸಿ ನೋಡಿದರೆ ಅನ್ಯಾಯಿಗಳೇ ಸುಖವಾಗಿರುವುದು ಹೆಚ್ಚು. ಎಲ್ಲಾ ಅವರವರ ಕರ್ಮಾನುಸಾರ ಎನಿಸುತ್ತೆ. ಯಾವುದನ್ನೂ ಹೀಗೇ ಎಂದು ವಿಶ್ಲೇಷಿಸುವುದು ಕಷ್ಟ."

"ಅದು ನಿಜವೇ ಸುಮನಾ. ಮನಸ್ಸು ನೊಂದಾಗ ಏನೇನೋ ಯೋಚನೆ ಬರುತ್ತೆ ಬಿಡು. ಅಂತೂ ಹೀಗಾಗಬಾರದಿತ್ತು."

"ಕೊಲೆ ಅಂದ ಮೇಲೆ ಜೈಲು ಕಠಿಣ ಶಿಕ್ಷೆ ಗ್ಯಾರಂಟಿ."

"ಉನ್ನತ ಸಮಾಜದಲ್ಲಿ ಪ್ರತಿಷ್ಠಿತ ವ್ಯಕ್ತಿಯ ಗೌರವ ಕಾಲ ಕಸವಾಯಿತು."

ಊಟ ಮುಗಿಸಿ ಹೊರಬಂದಾಗಲೇ ಚಂದ್ರಿಯ ಆಗಮನ. ಅವಳು ಬಂದೊಡನೆಯೇ "ನಿನ್ನೆಯೇ ಬರಬೇಕೆಂದಿದ್ದೆ ಆಗಲಿಲ್ಲ. ತುಂಬಾ ಕೆಲಸ ಇತ್ತು" ಎಂದಳು.

"ಏನು ಸಮಾಚಾರ?"

"ನಿನ್ನೆ ಇಲ್ಲಿಂದ ಇಬ್ಬರು ಹೋಗಿದ್ದರು ಸಬ್ ಇನ್ಸ್‌ಪೆಕ್ಟರ್ ಮನೆಗೆ. ಅಂಗಳದಲ್ಲಿದ್ದನಂತೆ ಆತ. ದೂರದಿಂದ ಇವರಿಬ್ಬರನ್ನೂ ಕಂಡೊಡನೆಯೇ ಒಳಗಡೆ ಸೇರಿಕೊಂಡನಂತೆ! ಇವರೂ ನೋಡಿದಾರೆ. ಆತನೂ ನೋಡಿದಾನೆ. ಇವರು ಮನೆಯಲ್ಲಿ ಕೇಳಿದಾಗ ಅವರ ಹೆಂಡತಿ "ಅವರು ಮೈಸೂರಿಗೆ ಹೋಗಿದಾರೆ" ಎಂದಳಂತೆ! ಆತ ಹೇಳಿಕಳಿಸಿದಂತೆ ಅವಳ ಉತ್ತರ! ಇಬ್ಬರೂ ಮನೆಯಲ್ಲಿ "ಎಂಥಾ ಠಕ್ಕ" ಎಂದು ಮಾತಾಡಿಕೊಳ್ಳುತಿದ್ದರು. ಆದ್ದರಿಂದ ಮೊನ್ನೆ ರಾತ್ರಿ ಇಲ್ಲಿಗೆ ಬಂದವನು ಅವನೇ ಎಂಬುದು ಶತಸ್ಸಿದ್ಧ! ಅಲ್ಲವಾದಲ್ಲಿ ಮನೆಯಲ್ಲಿದ್ದು ಇಲ್ಲ ಎನಿಸಿಕೊಳ್ಳಲು ಕಾರಣವೇನು?"

ಮೋಹಿನಿಯ ಮುಖ ಕಪ್ಪಿಟ್ಟಿತು; ಮೈಯ್ಯ ನೆತ್ತರೆಲ್ಲಾ ಒಂದೇ ಬಾರಿಗೆ ಹೆಪ್ಪುಗಟ್ಟಿದಂತೆ!

"ಹೆದರಿಕೊಳ್ಳಬೇಡ....ಧೈರ್ಯವಾಗಿರಬೇಕು. ಧೈರ್ಯಂ ಸರ್ವತ್ರ ಸಾಧನಂ."

"ನನಗೆ ಭಯವಿಲ್ಲ. ಕಬ್ಬಿಣದ ಊದುಕೊಳವಿಯನ್ನು ಪಕ್ಕದಲ್ಲಿಟ್ಟುಕೊಂಡೇ ನಾನು ಮಲಗುವೆ. ಯಾರು ಬಂದರೂ ತಲೆ ಒಡೆಯುವಷ್ಟು ಧೈರ್ಯವಿದೆ. ಆದರೂ, ಈ ದುಷ್ಟ ಜಾತಿಯನ್ನು ಕುರಿತು ಯೋಚಿಸಿದೆ ಅಷ್ಟೆ....ಈ ಪ್ರಪಂಚ ಇಷ್ಟೆ; ಧರ್ಮನಿಷ್ಠೆಯೂ ಇಷ್ಟೆ."

ತರ್ಕವಿತರ್ಕಗಳ ಸಮುದಾಯವನ್ನು ದಾಟಿ ಹೊರಬಿದ್ದ ಭಾವನಾ ತರಂಗಗಳ ಪ್ರವಾಹದಲ್ಲಿ ಕೊಚ್ಚಿ ಹೋಗುವಷ್ಟು ಬರ್ಬರತೆ ಮನದಲ್ಲಿ. ಹೃದಯ ಧರಿತ್ರಿಯ ಪರಿಮಿತ ಈಗಲೀಗ ಬಿರಿಯುವುದೋ ಎಂಬಂತೆ ವ್ಯಾಪ್ತಿಗೆ ಮೀರಿತು. ಮೋಹಿನಿ ಮಾತಾಡದೆ ಸುಮ್ಮನೆ ಕುಳಿತುಬಿಟ್ಟಳು.

ಸುಮನಾ ಹೊರಡಲು ಎದ್ದು ನಿಂತು "ಮೋಹಿನಿ! ನಾಳೆ ಆ ಮೇಸ್ತ್ರಿ ಕೆಲಸ ಹಿಡಿಸಬಹುದೇನೋ ಶಾಲೆಯಿಂದ ಹೋಗುವಾಗ ಹೀಗೆಯೇ ಬಂದು ಹೋಗುವೆ."

"ಆಗಲಿ, ಬಾ. ಇಬ್ಬರೂ ಕೂಡಿಯೇ ಹೋಗೋಣ."

ಅವಳು ಹೊರಟಳು. ಹಿಂದಿಲಿಂದ ದೈನ್ಯ ನೋಟ ಕಣ್ಮರೆಯಾಗುವವರೆಗೂ ನಿಟ್ಟಿಸಿತು.

೨೫

ಜೀವನಾರಣ್ಯದ ಅಂಧಕಾರ ಮಾರ್ಗಯೋಗದಲ್ಲಿ ಸಮುದ್ರರಾಜನ ಅದ್ಭುತ ಅಲೆಗಳ ಮಧ್ಯೆ ನುಗ್ಗುವ ಸಾಹಸಿಯಂತೆ ಹೋರಾಡದೆ ಗತ್ಯಂತರವಿಲ್ಲ. ಒಂದು ಗಳಿಗೆ, ಒಂದೇ ಒಂದು ಗಳಿಗೆ ನಿಂತರೂ ಸೋಲೊಪ್ಪಿಕೊಂಡಂತೆ ಎಂದು ಮೂದಲಿಸುತ್ತದೆ ಅನುರಣಿತ ಬೌದ್ಧಿಕ ಶಕ್ತಿ.

ಪ್ರಕೃತಿಗಿರುವಂತೆಯೇ ಜೀವನಕ್ಕೂ ಒಂದು ಪ್ರತ್ಯೇಕ ಸ್ವರೂಪವಿದೆ. ಆದರೆ....ಆದರೆ, ಪ್ರಕೃತಿಗಿರುವ ಅಗಾಧವಾದ ಸ್ವರೂಪ ಅಸಮಾನ್ಯ. ಇರಲಿ, ಜೀವನ ಪ್ರಕೃತಿ ಅಲ್ಪವಾದುದೇನೂ ಅಲ್ಲ; ಅದು ತನ್ನನ್ನು ಆರಾಧಿಸುವವರಿಗಿಂತಲೂ, ಮರ್ದನಗೊಳಿಸುವವರಿಗೆ ಆತ್ಮಸ್ವರೂಪ ದರ್ಶನ ನೀಡುವುದೋ ಏನೋ....

ಇಂದು, ತನ್ನ ಬಾಳೇ ಅದಕ್ಕೆ ನಿದರ್ಶನ. ಏನೋ ಒಂದು ರೀತಿಯಲ್ಲಿ ಅಸ್ಪೃಶ್ಯಳಂತೆ–ಅಪವಿತ್ರಳಂತೆ ಜೀವನರಂಗಕ್ಕೆ ಹೊರತಾಗಿ ಬಾಳುತ್ತಿರುವಂತೆ ಎಷ್ಟೋ ಬಾರಿ ಅನಿಸುತ್ತದೆ. ದುಃಖ ದುಮ್ಮಾನಗಳ ತೀಕ್ಷ್ಣಜ್ವಾಲೆ ನರನಾಡಿಗಳು ಸೀಳಿ ಹೋಗುವಂತೆ ಹರಿದಾಡುತ್ತದೆ. ದುಡಿಮೆ ಕಡಿಮೆಯದಲ್ಲ; ಬದುಕು ಅಸುಂದರವಲ್ಲ; ಬೌದ್ಧಿಕಸ್ತರ ಅಸೂಕ್ಷ್ಮವಲ್ಲ.

"ಆದರೇನು?"

ಸಾಮಾಜಿಕ ರಂಗದ ಕಲುಷಿತ ಅಲೆಗಳು ಸುತ್ತಮುತ್ತಲೂ ನುಗ್ಗಿಬರುವುದನ್ನು ನೋಡಿದರೆ ನಿಂತ ನೆಲೆ ಬಿರಿಯಬಾರದೇ ಎಂಬ ಯೋಚನೆ ಬರುತ್ತಲೇ ಇರುತ್ತದೆ. ಆದರೆ, ಈ ಜೀವನವೇ 'ಆದರೆ'ಮಯ. ಆದರೆ ಎಂಬ ಶಬ್ದ ಇಲ್ಲದೆ ಹೋಗಿದ್ದಿದ್ದರೆ ಜೀವನದ ಗತಿಯೇ ಬೇರೆಯಾಗುತ್ತಿತ್ತೇನೋ....ಜೀವನ ಕುಸುಮದ ಸುತ್ತಮುತ್ತ ಜಾಜಿ ಹೂವಿಗಿರುವಂತೆ ಮೊನಚು ಮುಳ್ಳುಗಳು.

ಮಾನಸಿಕ ತುಮುಲದಲ್ಲಿ ಬಹಳ ಹೊತ್ತು ನಿದ್ದೆ ಬರಲಿಲ್ಲ. ಮೋಹಿನಿ ಅತ್ತಿತ್ತ ಹೊರಳಾಡಿ ಮಗ್ಗುಲು ಬದಲಿಸಿ ಮಕ್ಕಳನ್ನು ತಬ್ಬಿ ಮಲಗಿದಳು; ಆದವೂ ನಿದ್ರೆ ದೂರವೇ. ದಿನವೂ ಇದೇ ಪಾಡು. ಒಂದಿನ ಬಂದರೆ ಒಂದಿನ ಇಲ್ಲ.

ಹಗಲೆಲ್ಲಾ ಕೆಲಸದಲ್ಲಿ ಕಳೆದರೆ ರಾತ್ರಿ ಕಳೆಯುವುದು ಕಷ್ಟ. 'ಟೀಚರ್ ಟ್ರೈನಿಂಗ್'ಗೆ ಓದುತಿದ್ದುದರಿಂದ ನಿದ್ದೆ ಬರುವವರೆಗೆ ಓದುವ ಕ್ರಮ. ಮಧ್ಯರಾತ್ರಿ ಕಳೆದು ಬ್ರಾಹ್ಮೀ ಮುಹೂರ್ತ ಆಡರಿ ತಂಗಾಳಿ ತಣ್ಣಗೆ ಬೀಸತೊಡಗಿದ ಮೇಲೆಯೇ ಕಣ್ಣಿಗೆ ಮಂಪರ. ದೂರದ ಚರ್ಚ್ ಗಂಟೆ ಬಾರಿಸಿತು ಒಂದು, ಎರಡು, ಮೂರು.

ಮೋಹಿನಿ ಬಿಗಿಯಾಗಿ ಹೊದ್ದು ಮಲಗಿದಳು ಮಗ್ಗುಲಾಗಿ.

....ದೂರ. ದೂರ. ದೂರದ ಪಯಣ. ಕಂಡರಿಯದ ತಾಣದಲ್ಲಿ ಕಾಲ್ನಡಿಗೆಯ ಪಯಣ. ಆದರೂ, ಕಾಲು ದಣಿಯವು,

ಮನಸ್ಸು ಮಣಿಯದು. ಮುಳ್ಳು ಕಂಟಿ ತುಂಬಿದ ಮುಳ್ಳುಗಾಡಿನ ಪ್ರವೇಶವೇ? ಏನಿದು? ಎತ್ತ ಸಾಗುತ್ತಿದೆ ಪಯಣ? ಯಾರೂ ನನಗೆ ಮಾರ್ಗದರ್ಶಕರಿಲ್ಲವೇ? ಏನು ಗತಿ? ಎಲ್ಲಿಂದ ಎಲ್ಲಿಗೆ ಪಯಣ? ನಾನೇಕೆ ಬಂದೆ?

ಮತಿಭ್ರಾಂತಿ ಹರಿಯುವ ಮುನ್ನ ಮುಂದೆ ನಸು ದೂರದಲ್ಲಿ ಕಾಣಿಸುವವ ರಾರು? ಬೇಕರಿ ಯಜಮಾನರೇ? ಓ ಹೌದು! ಅವರಿರುವಾಗ ಏನು ಭಯ? ವೃದ್ಧ ಶರೀರ ದಪ್ಪ ದಪ್ಪ ಹೆಜ್ಜೆಗಳನ್ನಿಡುತ್ತಾ ಮುಂದುವರಿಯುತ್ತಲೇ ಇದೆ. ಅವರನ್ನು ಸರಿಗಟ್ಟಲಾರದಷ್ಟು ತಾನು ಹಿಂದೆ....ಹೆಜ್ಜೆಗಳು ಬಿರುಸಾದುವು, ಹಾದಿ ಬೇಗ ಬೇಗ ಸಾಗಿತು. ಮುಂದೆ ನೋಡಿದರೆ ಆ ವ್ಯಕ್ತಿ ಬೇರೆ. ಯಜಮಾನರಲ್ಲ. ನಸು ತೆಳ್ಳಗಿನ ನೀಳವಾದ ಶರೀರ. ಯಾರಿರಬಹುದು? ಹಿಂಭಾಗದಿಂದ ನೋಡಿದರೆ ತಿಳಿಯುವುದಾದರೂ ಹೇಗೆ? ಹತ್ತಿರ ಹೋದರೆ ಯಾರೆಂದು ತಿಳಿಯಬಹುದು. ಹತ್ತಿರ ಹತ್ತಿರ ಹೋಗುತ್ತಲೂ ಕಾಲ ಸಪ್ಪಳ ಕೇಳಿ ಹಿಂದಿರುಗಿ ನೋಡಿತು ಆವ್ಯಕ್ತಿ. ಅರೆ! ಏನಾಶ್ಚರ್ಯ! ವಸಂತ್!

"ಹೌದು! ನಾನೇ ವಸಂತ್!"

"ಅರೆ! ಬಾಬಾ! ಎಷ್ಟು ವರ್ಷದ ಮೇಲೆ....ನಿನ್ನ ದರ್ಶನ?"

ಆ ಕ್ಷಣವೇ ಎಚ್ಚರವಾಯಿತು. ಕಣ್ಣು ಬಿಟ್ಟು ನೋಡುತ್ತಾಳೆ. ಬರೀ ಕನಸು.

* * *

ಆ ಮನೆಯಲ್ಲಿ ಔಟ್‌ಹೌಸಿನ ರಿಪೇರಿ ನಡೆಯುತ್ತಲಿದೆ. ಬಲಗಡೆ ಇದ್ದ ಔಟ್‌ಹೌಸ್‌ನಲ್ಲಿ ಎರಡು ಒಕ್ಕಲು ಬೇರೆ ಇದ್ದಾರೆ. ಮನೆಯ ಸುತ್ತ ಮುತ್ತ ರಿಪೇರಿ ಎಂದರೆ ತುಂಬ ಹಣವೇ ಬೇಕು. ಸಾಲಾಗಿ ಹೆಮ್ಮರಗಳೂ ಇವೆ. ಕಸಗುಡಿಸಿ

ಸ್ವಚ್ಛಗೊಳಿಸಲು ಝಾಡಮಾಲಿಯನ್ನು ನೇಮಿಸಿಕೊಳ್ಳಬೇಕು. ಇದೆಲ್ಲಾ ಯೋಚಿಸುತ್ತಾ ಹೋದರೆ ಖರ್ಚಿಗೆ ಹಣದ ಥೈಲಿ ದೊಡ್ಡದೇ ಇರಬೇಕು. ಬೇಕರಿಗೆ ಹೋಗುವ ಹಾದಿಯಲ್ಲಿ ರಿಪೇರಿ ಕೆಲಸವನ್ನು ನೋಡಿಕೊಂಡೇ ಹೋಗುತ್ತಾಳೆ ಮೋಹಿನಿ. ಅವಳ ಉತ್ಸುಕತೆ–ಕಾರ್ಯಚತುರತೆ–ಬುದ್ಧಿವಂತಿಕೆ ಮನಗೊಂಡು ಮೆಚ್ಚಿದ ಯಜಮಾನ ಅವಳೊಡನೆ ಮುಂದಿನ ಕಾರ್ಯಕ್ರಮಗಳನ್ನು ಕುರಿತು ಎರಡು ಮಾತಾಡುವ.... ಅವಳ ಪ್ರತ್ಯುತ್ತರಗಳಿಂದ ಸಂಪ್ರೀತನಾಗುವ....ಒಳ್ಳೆಯ ಮಾತುಗಳಿಂದ ಹರಸುವ.

"ಈ ಕಾಲದಲ್ಲಿ ಹೆಣ್ಣು ಎಷ್ಟು ಕಲಿತರೂ ಸಾಲದು. ಅವಿದ್ಯೆಯಿಂದಲೇ ಹೆಣ್ಣಿನ ದಮನ."

"ಇದರ ಸಾಧನೆ ಯಾವ ಕಾಲಕ್ಕೋ ದೇವರೆ! ನಮ್ಮ ಹೆಣ್ಣುಗಳು ಇನ್ನೂ ಕಣ್ಣು ಬಿಡುವುದರಲ್ಲಿದ್ದಾರೆ. ಎರಡುಮೂರು ಶತಮಾನಗಳೇ ಬೇಕೋ ಏನೋ...."

"ನಿಜ; ಮೋಹಿನಿ....ಆಗುವುದೇನೋ ಹೋಗುವುದೇನೋ....ಎನಿಸುತ್ತೆ ಇಂದಿನ ಪರಿಸ್ಥಿತಿ ನೋಡಿದರೆ."

"ಅಂತೂ, ನಮ್ಮ ಕರ್ತವ್ಯ ನಾವು ಅರಿತುಕೊಳ್ಳುವುದರಲ್ಲೇ ಪರಿಸರದ ಉದ್ಧಾರ ಎನ್ನೋಣ."

"ಹೌದಮ್ಮಾ....ಹೌದು. ಇನ್ನೊಂದು ತಿಳಿದುಕೊ. ಪ್ರತಿ ಹತ್ತು ಮಂದಿಯಲ್ಲಿ ಒಬ್ಬೊಬ್ಬರಾದರೂ ಹೀಗೆ ಮುಂದೆ ಬರುವುದಾದರೆ....ಅಂದರೆ ಸಾರ್ವಜನಿಕ ಸಂಸ್ಕಾರ ಸಂಬಂಧವಾಗಿ ಎಂದರ್ಥ. ಈ ಸ್ಕೂಲ್ ವಿಚಾರ ಒತ್ತಟ್ಟಿಗಿರಲಿ, ಈಗೀಗ ಇವು ಸಾಕಷ್ಟು ಹುಟ್ಟಿಕೊಳ್ಳುತ್ತಿವೆ. ಮನೆ ಮನೆಯ ಸ್ತ್ರೀ ಜನಾಂಗ 'ತನ್ನತನ'ವನ್ನು ಅರಿತುಕೊಳ್ಳುವಂಥ ತಿಳಿವಳಿಕೆಯ ಅಗತ್ಯ ತುಂಬಾ ಇದೆ. ಇದರ ನಿರೂಪಣೆ ಹೇಗೆ ಎಂಬುದನ್ನು ಕುರಿತು ಚಿಂತಿಸು."

"ಸರ್ ಹಿಂದೂಸ್ಥಾನದಲ್ಲಿ ನಾವು ತಿಳಿದುಕೊಂಡರೂ ವ್ಯರ್ಥವೇ.... ತೋಳ್ಬಲದ ಮುಂದೆ ನಾವು ಏನು ಮಾಡಬಲ್ಲೆವು? ಸ್ವಾತಂತ್ರ್ಯಾನಂತರ ದೇಶದಲ್ಲಿ ಮನೆಮನೆಯಲ್ಲೂ ವಿದ್ಯಾವತಿಯರಿದ್ದಾರೆ. ಅವರಿಗೆ ವೈಯಕ್ತಿಕ ಸ್ವಾತಂತ್ರ್ಯ ದೊರಕಿದೆಯೇ? ರಾಜಕೀಯ ಕ್ಷೇತ್ರದಲ್ಲಿ ಶೇಕಡಾ ಎಷ್ಟು ಮಂದಿಗೆ ಅವಕಾಶವಿದೆ? ಇದನ್ನೆಲ್ಲಾ ಯೋಚಿಸುತ್ತಾ ಹೋದರೆ ಮುಂದಿಟ್ಟ ಹೆಜ್ಜೆಯನ್ನು ಹಿಂದೆಗೆಯ ಬೇಕಾಗುತ್ತದೆ. ಅಂದಮೇಲೆ ಏನು ಮಾಡೋಣ ಹೇಳಿ."

ಮೋಹಿನಿಯ ವಾದ ತಲೆಯ ಚಿಂತಾವಲಯದಲ್ಲಿ ಸುಳಿ ಸುತ್ತುತ್ತಲೇ

ಇದೆ. ವೃದ್ಧ ಮಹಾಶಯ ಒಂದೆರಡುಗಳಿಗೆ ಚಿಂತಾಮಗ್ನನಾದ. ಹಿಂದೂಸ್ಥಾನದ ಜನಜೀವನ ಅಕ್ಷಿಪಟಲದ ಮೇಲೆ ಚಲನ ಚಿತ್ರದಂತೆ ಸುಳಿದಳಿಯಿತು. ದಲಿತರೊಳಗೆ ದಲಿತರು ಸ್ತ್ರೀಜನ ಎಂಬುದು ಸತ್ಯ. ವಿದ್ಯಾವಂತರಿಗೂ ಪುರುಷ ಸಮಾನತೆ ಬಂದಿಲ್ಲವೆಂಬುದೂ ನಿಜವೇ.....

"ಸರ್, ನಮ್ಮ ದೇಶದಲ್ಲಿ ಬಡತನದ ರೇಖೆಯ ಕೆಳಗೇ ಇರುವ ಬಡ ಜನ. ಇವರಲ್ಲಿ ಮತಿ ಮೌಢ್ಯದಿಂದ ಮೂಢನಂಬಿಕೆಗಳಿಂದ ತಮಗೆ ತಾವೇ ಉರುಳಾಗುವ ಸ್ತ್ರೀಜನ ಶೇಕಡಾ ಎಪ್ಪತ್ತೈದು ಮಂದಿ ಇದ್ದಾರು. ಉಳಿದ ಮಂದಿ ಯಲ್ಲಿ ಹಾಗೂ ಹೀಗೂ ಇರುವ ಮಧ್ಯಮ ವರ್ಗದವರು ಏನು ಮಾಡಬಲ್ಲರು ಹೇಳಿ? ಉದಾಹರಣೆಗೆ ನಾನೇ ಸಾಕಲ್ಲ; ಎಂದರೆ ಒಪ್ಪುತ್ತೀರಷ್ಟೆ."

ವೃದ್ಧ ಮಹಾಶಯ ನಗುತ್ತ ಹೇಳಿದರು "ನಿನ್ನ ಜ್ಞಾನದ ಮಟ್ಟವನ್ನೇಕೆ ನೀನೇ ಮೊಟಕುಗೊಳಿಸುತ್ತೀ? ಭಗವಂತ ತೋರಿದ ದಾರಿಯಲ್ಲಿ ನಡೆ. ನೀನು ತೀರ ಮುಟ್ಟುವುದಲ್ಲದೆ, ನಿನ್ನ ಪರಿಸರವನ್ನೂ ಮುಟ್ಟಿಸಬಲ್ಲೆ....ನಾನು ವೃದ್ಧನಾಗಿಬಿಟ್ಟೆ. ನಿನ್ನಂತಹವರಿಗೆ ಪ್ರೋತ್ಸಾಹ ನೀಡಬಹುದೇ ಹೊರತು ಇನ್ನೇನೂ ಮಾಡಲಾರೆ. ದೇವರು ನಿನಗೆ....ಮಂಗಳವನ್ನುಂಟು ಮಾಡಲಿ."

"ತುಂಬಾ ವಂದನೆಗಳು ಸರ್."

ಅವಳು ಅಲ್ಲಿಂದ ಹೊರಟಳು. ತಂಗಾಳಿಯಲ್ಲಿ ಶೀತಲತೆಯು ತುಂಬಿ ಮೈಮನ ತಣಿಸುತ್ತಿದೆ. ಅಂಬರದಲ್ಲಿ ಅಲ್ಲೊಂದು ಇಲ್ಲೊಂದು ಉದಿತೋದಿತ ನಕ್ಷತ್ರಗಳು. ನಿರ್ಭಾರವಾಗಿ ತೇಲುವ ಮೋಡಗಳು....ಈ ಜಗತ್ತು, ಈ ಪ್ರಕೃತಿ ಎಷ್ಟೊಂದು ನೀತಿನಿಯಮಬದ್ಧವೋ ನರಜಂತುಗಳ ಸಮಾಜ ಅಷ್ಟೇ ನೀತಿ ನಿಯಮರಾಹಿತ್ಯ.ಇದೆಂದಾದರೂ ಸರಿದಾರಿ ಹಿಡಿಯುವುದುಂಟೇ ?....ಹಾಯ್! ಭಗವಂತನೇ ಶ್ರೀರಕ್ಷೆ.

ಮೋಹಿನಿ ಮನೆ ಮುಟ್ಟಿದಾಗ ಮಕ್ಕಳೊಡನೆ ಚಂದ್ರಿ ಮಾತಾಡುತ್ತ ಕುಳಿತಿದ್ದಳು.

"ತುಂಬಾ ಬೇಸರವಾಗಿತ್ತಮ್ಮಾ, ಅದಕ್ಕೇ ಆಂಟಿಯನ್ನು ಕರೆದೆ" ಎಂದಳು ಮೀನಾ.

"ಇಂದು ಸ್ವಲ್ಪ ಹೊತ್ತಾಯಿತಲ್ಲವೇ?"

ಚಂದ್ರಿ ನಗುನಗುತ್ತ ಹೇಳಿದಳು "ಬಿಡು, ಹೊಸ ಮನೆಗೆ ಹೋದ ಮೇಲೆ ನಿಮ್ಮ ಅಮ್ಮ ಮನೆಯಲ್ಲೇ ಇರುತ್ತಾಳೆ."

ಮಕ್ಕಳು ಹರ್ಷಸೂಚಕವಾಗಿ ನಗುವಿನಲೆ ಹರಿಸಿದರು. ಮೋಹಿನಿ

ಮಾತಾಡದೆ ಮುಗುಳು ನಕ್ಕಳು.

ಚಂದ್ರಿ ಆಗಲೇ ಮಕ್ಕಳಿಗೆ ಚಹ ತಯಾರಿಸಿ ಕೊಟ್ಟಿದ್ದಳು. ಮೋಹಿನಿ ರೊಟ್ಟಿಯನ್ನು ಎಲ್ಲರಿಗೂ ಕೊಟ್ಟು ಉಳಿದುದನ್ನು ಚಂದ್ರಿಯೊಡನೆ ತಾನೂ ಹಂಚಿಕೊಂಡು ಚಹ ಕುಡಿದಳು. ದೂರ ಸೀಮಾ ಕ್ಷೇತ್ರದಲ್ಲಿ ಚಂದ್ರೋದಯ ದೃಷ್ಟಿಗೆ ಬಿತ್ತು.

* * *

ಶ್ಯಾಂ ಕರೆಗಂಟೆ ಒತ್ತಿದಾಗ ಇನ್ನೂ ಮುಸ್ಸಂಜೆಗತ್ತಲು ಕವಿದಿರಲಿಲ್ಲ.

ಮಕ್ಕಳೆಲ್ಲಾ ಮರುದಿನದ ಪಾಠದ ತಯಾರಿ ನಡೆಸಿದ್ದರು. ಮೋಹಿನಿಯು ಮಕ್ಕಳಿಗೆ ಪಾಠ ಹೇಳುತ್ತಿದ್ದುದನ್ನು ಬಿಟ್ಟು ಕಿಟಿಕಿಯಲ್ಲಿ ಹಣಕಿ ನೋಡಿದಳು. ಬಂದವನು ಶ್ಯಾಂ ಅವನು ಈ ಹೊತ್ತಿನಲ್ಲಿ ಬರುವುದು ಅಪರೂಪವೇ. ಕದತೆರೆದು "ಏನಣ್ಣಾ" ಎಂದಳು.

"ಇಂದು ಗೋಪು ನಿನಗೊಂದು ಕಾಗದ ಕಳುಹಿಸಿದ್ದಾನೆ. ಮುದ್ದಣ್ಣ ಬಂದು ಕೊಟ್ಟು ಹೋದ."

"ಥೂ!"

"ಕಳುಹಿಸಿದ್ದಾನೆ. ಏನು ಮಾಡುತ್ತಿ?"

"ಏನು ಬರೆದಿದ್ದಾನೆ ನೀವೇ ಓದಿಬಿಡಿ. ನಾನಂತೂ ಮುಟ್ಟಲಾರೆ."

ಶ್ಯಾಂ ಕಾಗದ ತೆರೆದು ಓದಿದ,

....ಸಧ್ಯ ನನ್ನನ್ನು ಬಿಡಿಸಿಕೊಳ್ಳಲು ಒಂದೇ ಒಂದು ದಾರಿ ಇದೆ. ನೀನು ಇದನ್ನು ಅವಮಾನ ಎಂದೇನೂ ಭಾವಿಸಬೇಡ. ನಾನು ಸಂಪೂರ್ಣ ಒಪ್ಪಿಗೆಯಿಂದ ಬರೆಯುತ್ತಿರುವೆ. ಸಬ್ ಇನ್ಸ್‌ಪೆಕ್ಟರ್ ಮಲ್ಲಾರಿ ಬಳ್ಳಾರಿಗೆ ಒಂದು ವಾರ ಹೋಗಲಿದ್ದಾರೆ. ನೀನು ಅವರೊಂದಿಗೆ ಹೋಗಿ ಒಂದು ವಾರ (ಅವರೊಂದಿಗೆ) ಪೂರ್ಣ ಸಹಕರಿಸಿದರೆ ನನ್ನನ್ನು ಬಿಡುಗಡೆ ಮಾಡಿಸಿ ಎಲ್ಲಾ ಅನುಕೂಲಗಳನ್ನೂ ಕಲ್ಪಿಸುತ್ತಾರಂತೆ! ನೀನು ದಯಮಾಡಿ ಸಹಕರಿಸು.

ಆ ತಕ್ಷಣ ಮೋಹಿನಿ ಎರಡೂ ಕೈಗಳಿಂದ ಕಿವಿಗಳನ್ನು ಮುಚ್ಚಿಕೊಂಡು "ರಾಮ ರಾಮಾ" ಎಂದಳು. ಮೈಯಲ್ಲಿ ಬಿಸಿ ನೆತ್ತರಿನ ಝರಿ ಜರ್ರನೆ ಹರಿದಾಡಿತು.

"ಬದ್ಮಾಷ್!!" ಚೀರಿದ ಶ್ಯಾಂ!

ಇನ್ನೇನು ಸಿಟ್ಟಿನಿಂದ ಕಾಗದವನ್ನು ಹರಿದು ಚೂರು ಚೂರು ಮಾಡಬೇಕು.

ಅಷ್ಟರಲ್ಲೇ ಮೋಹಿನಿ ತಡೆದು "ಹರಿಯಬೇಡಿ. ಅದೊಂದು ದಾಖಲೆಯಾಗುತ್ತೆ!!" ಎಂದಳು.

"ನೀಚ! ಈ ಕಾಗದ ಸನ್ನ ಮೂಲಕ ಕಳುಹಿಸಿದ್ದಾನಲ್ಲ. ಛೀ! ಛೀ! ಅವನು ಅಂದೇ ಸತ್ತಿದ್ದರೆ ಚೆನ್ನಾಗಿತ್ತು!! ದೇವರು ಇಂಥವರಿಗೆ ಅಧಿಕ ಆಯುಸ್ಸು ನೀಡುತ್ತಾನೆ! ಅದೇ ವಿಶೇಷ!" ಎಂದ ಅವನು ಪುನಃ "ಇದನ್ನು ಜೆರಾಕ್ಸ್ ಮಾಡಿಸಿ ಆಫೀಸಿನಲ್ಲೆಲ್ಲಾ ಹಂಚಿ ಮಲ್ಲಾರಿಯನ್ನು ಈ ಊರಿನಿಂದಲೇ ಓಡಿಸುವಂತೆ ಮಾಡುವೆ!" ಎಂದು ಒದರಿದ. ಸಿಟ್ಟು ರೋಷಗಳ ಝರಿ ಮೈಯಲ್ಲೆಲ್ಲಾ ಹರಿದಾಡಿತು.

ಕಣ್ಣುಗಳಲ್ಲಿ ಕೋಪದ ಕಿಡಿಗಳು ಝುಳಝುಳಿಸಿದುವು.

ಮಕ್ಕಳು ವಿಷಯವೇನೆಂದು ಅರ್ಥವಾಗದೆ ಮಿಕಮಿಕ ನೋಡಿದರು.

ಉದ್ಭಾಸಿತಾ ಖಲಖಲಸ್ಯ ವಿಶೃಂಖಲಸ್ಯ
ಪ್ರಾಜ್ಞಾತ ವಿಸ್ಮೃತ ನಿಜಾಧಮ ಕರ್ಮವೃತ್ತೇಃ ।

೨೫

ಶಿಶಿರ ಪ್ರಭು ಹಿಂಜರಿಯುತ್ತಲೂ ವಸಂತ ಪ್ರಭು ದೂರನೇ?

ರಾಜ್ಯದಾದ್ಯಂತ ವಸಂತ ಪ್ರಭುವಿನ ಒಡ್ಡೋಲಗ ಅತ್ಯಂತ ಸತ್ಯ ಸುಂದರ. ವಿವಿಧ ವರ್ಣವರ್ಣದ ಪುಷ್ಪಸಮುಚ್ಚಯಗಳಿಂದ ಸಿಂಗರಿಸಿಕೊಂಡ ಸಸ್ಯರಾಜಿ, ಬೆಳ್ದಳಿರು, ಕೆಂದಳಿರು, ಹಸುರ್ದಳಿರು, ಬೆಳ್ದಳಿರುಗಳಿಂದ ನಳನಳಿಸುವ ಶೋಭಾ ಶೈಲಿಯ ರಸವೃಷ್ಟಿಗೆ ಭವ್ಯ ದೇಗುಲವೇ....

ನಗರ ವಲಯದಲ್ಲಿ ಎಲ್ಲಿ ನೋಡಿದರೂ ಜೇನ್ದುಂಬಿಗಳ ಝೇಂಕಾರ.

ಮೋಹಿನಿ ಮಕ್ಕಳೊಂದಿಗೆ ರಾಯರ ಮನೆಗೆ ಬಂದ ದಿನವೇ 'ಸರಸ್ವತೀ ವಿದ್ಯಾಲಯ' ಎಂಬ ಹಣೆ ಪಟ್ಟಿಯನ್ನು ಕಟ್ಟಿಕೊಂಡಿತು ಹಿರಿಯ ಮಂದಿರ. ಪ್ರಾಕಾರದ ಬಾಗಿಲೂ ಅದೇ ಹಣೆಪಟ್ಟಿಯಿಂದ ಅಲಂಕರಿಸಿಕೊಂಡಿತು.

ಶಾಲೆಗೆ ಪ್ರವೇಶದ ಗಲಾಟೆ ಆಗಲೇ ಆರಂಭ....ಬಾಲವಾಡಿಯ ಮಕ್ಕಳು ಇಲ್ಲಿಗೇ ಬರುವವರಿದ್ದರು. ಪ್ರೈಮರಿಶಾಲೆ ನಡೆಸಲು ಸರಕಾರದಿಂದ ಪರವಾನಗಿ ಪಡೆಯಬೇಕಿತ್ತು. ಸುಮನಾ ತನ್ನೆರಡು ಮಕ್ಕಳೊಂದಿಗೆ ಮೋಹಿನಿ ಒಕ್ಕಲಾದ ದಿನವೇ ಬಂದಿದ್ದಾಳೆ. ಒಂದೇ ಸೂರಿನಡಿ ಎರಡು ಸಂಸಾರಗಳು. ಒಂದೇ ರೀತಿಯ ಎರಡೂ ಮನೆಗಳಿಗೆ ಒಂದೇ ಅಗಲವಾದ ಜಗಲಿ. ಮೊದಲು ಅದಕ್ಕೆ ಸುತ್ತೂ ಮುತ್ತೂ ಗೋಡೆಯಿರಲಿಲ್ಲ. ದುರಸ್ತಿಗೆ ಹಚ್ಚಿದಾಗ ಅರ್ಧ ಗೋಡೆಯ

ಮೇಲೆ ದಪ್ಪ ತಂತಿಯ ಜಾಲರಿ ಹಾಕಿಸಿ ಭದ್ರಪಡಿಸಲಾಗಿತ್ತು. ಜಗಲಿಯಲ್ಲಿ ಎರಡು ಬೆಂಚುಗಳು. ಎರಡೂ ಸಂಸಾರಕ್ಕೆ ಆ ದೊಡ್ಡ ಜಗಲಿ ಸ್ನೇಹ ಸಾಮರಸ್ಯದ ಕೇಂದ್ರ. ಕೆಲವೊಮ್ಮೆ ಎರಡು ಸಂಸಾರಗಳೂ ಒಂದೇ ಕಡೆ ರಾತ್ರಿ ಮಲಗುತ್ತಿದ್ದುದುಂಟು. ಅಂತೂ, ಆತ್ಮೀಯತೆಯ ಮಧ್ಯೆ ಹೊತ್ತು ಸಾನಂದದಿಂದ ಉರುಳುತಿತ್ತು.

ಐವರು ಮಕ್ಕಳಿಗೂ ಆಟ–ಪಾಠಗಳಿಗೆ ಜಗಲಿಯೇ ಕೇಂದ್ರ.

"ಅಂದೇ ಬರುತ್ತೇನೆಂದಿದ್ದ ಕಮಲಾ ಬಾರದಿರಲು ಏನು ಕಾರಣವೋ.... ಮೋಹಿನಿ, ಕೈ ಬಿಡುವಿದೆ. ನಾವು ಏಕೆ ಹೋಗಿ ನೋಡಿಕೊಂಡು ಬರಬಾರದು!"

ಸುಮನಳ ಪ್ರಶ್ನೆಗೆ ಪ್ರತಿ ಹೇಳಲಿಲ್ಲ ಮೋಹಿನಿ. ಇಬ್ಬರೂ ಹೊರಟರು. ಬಸ್ಸು ಹಿಡಿದು ಅವಳ ಮನೆ ಮುಟ್ಟಿದಾಗ ಮಧ್ಯಾಹ್ನ ಎರಡರ ಸಮಯ. ಅವಳು ಆದೇ ತಾನೇ ಊಟ ಮುಗಿಸಿ ವರ್ತಮಾನ ಪತ್ರಿಕೆಯಲ್ಲಿ ಗಮನವಿಟ್ಟಿದ್ದಳೇನೋ. ತಲೆಬಾಗಿಲ ಕರೆಗಂಟೆ ಕರೆಯಿತು ಡಿಂಗ್. ಡಾಂಗ್. ಡಿಂಗ್. ಡಾಂಗ್....

ಕಮಲಾ ಬಾಗಿಲು ತೆಗೆದವಳೇ "ಓ! ನಾನೇ ಬರಬೇಕೆಂದು ಪ್ರಯತ್ನಿಸಿದೆ; ಆಗಲೇ ಇಲ್ಲ. ಅಮ್ಮ ಮತ್ತು ಮಕ್ಕಳು ಒಬ್ಬರಾದ ಮೇಲೊಬ್ಬರು ಡಿಂಗೂ ಜ್ವರದಿಂದ ಮಲಗಿಬಿಟ್ಟಿದ್ದರು. ನೀವೇ ಬಂದದ್ದು ಒಳ್ಳೆಯದಾಯಿತು....ಬನ್ನಿ!" ಎಂದು ಬಾಯಿ ತುಂಬಾ ಸ್ವಾಗತಿಸಿದಳು.

ಇಬ್ಬರೂ ಒಳಹೋದರು. ಜ್ವರದಿಂದ ಚೇತರಿಸಿಕೊಳ್ಳತೊಡಗಿದ ತಾಯಿಯ ಮುಖಬಿಂಬದಲ್ಲಿ ಸೋಲು–ಆಯಾಸ ಎದ್ದು ಕಾಣಿಸುತಿತ್ತು ಮಕ್ಕಳು ಕೇರಂ ಆಟದಲ್ಲಿ ತೊಡಗಿದ್ದರು.

ಮೂವರೂ ಪಡಸಾಲೆಯಲ್ಲಿ ಕುಳಿತುಕೊಳ್ಳುತ್ತಲೂ ತಾಯಿಯು ಸ್ವಲ್ಪ ಹೊತ್ತು ಅವರೊಂದಿಗೆ ಕುಳಿತಿದ್ದು ಅನಂತರ ಒಳಗೆ ಹೋಗಿ ಮಲಗಿಕೊಂಡಳು.

"ಸುಮನಾಗೆ ಹೊರಗಡೆ ಒಂದು ನೆಲೆ ಸಿಕ್ಕಿದ್ದು ಅನುಕೂಲವೇ ಆಯಿತು ಅಲ್ಲವೇ?" ಎಂದಳು ಕಮಲಾ ಹುಬ್ಬೇರಿಸಿ.

"ಮದುವೆಗೆ ಮುಂಚೆಯೇ ಹೊರಡಬೇಕೆಂದಿದ್ದೆ ಆಗಲಿಲ್ಲ. ಅಂತೂ ಹೊರಬಿದ್ದೆ." ಪ್ರಸನ್ನ ಮುಖದಿಂದ ಹೊರಬಿತ್ತು ನುಡಿ.

"ಅನುಕೂಲವಾಗಿದೆಯೇ ?'

"ಒಂದು ಕೊಠಡಿ, ಹಾಲ್, ಅಡಿಗೆ ಮನೆ, ಬಚ್ಚಲು ಇಷ್ಟೆ. ಸಧ್ಯಕ್ಕೆ ಸಾಕು. ಮುಂದೆ ಸ್ಥಳವನ್ನು ಗೇಣಿಗೆ ಪಡೆದುಕೊಂಡರೆ ಒಂದೊಂದು ಕೊಠಡಿ ಕಟ್ಟಿಕೊಳ್ಳಲು ಅನುಕೂಲವಿದೆ. ಇಬ್ಬರ ಮನೆಯೂ ಒಂದೇ ಮಾಡಿನಡಿ

ಇರುವುದು ತುಂಬಾ ಕ್ಷೇಮ."

"ದೊಡ್ಡದಾದರೆ ಮನೆಯ ಸ್ವಚ್ಛತೆ, ಅದು ಇದು ಕೆಲಸ ಹುಟ್ಟಿಕೊಳ್ಳುತ್ತದೆ, ಸಧ್ಯಕ್ಕೆ ನಮಗೆ ಸಾಕು. ಬಲಪಕ್ಕದಲ್ಲಿ ಇಬ್ಬರು ಬಾಡಿಗೆದಾರ ಒಕ್ಕಲೂ ಇದ್ದಾರೆ. ವಾಸಕ್ಕೂ ಭಯವಿಲ್ಲ. ಸ್ಕೂಲು ಚೆನ್ನಾಗಿ ನಡೆಸುವುದೇ ನಮಗಿರುವ ಮುಖ್ಯವಾದ ಕೆಲಸ. ವರ್ಷೇ ವರ್ಷೇ ತರಗತಿಗಳನ್ನು ಹೆಚ್ಚಿಸಿಕೊಳ್ಳಬಹುದು ನಾಲ್ಕು ಕೊಠಡಿ ಒಂದು ದೊಡ್ಡ ಹಾಲ್ ಮತ್ತು ವರಾಂಡ ಇರುವ ದೊಡ್ಡ ಮನೆ. ಸುತ್ತಲೂ ಖಾಲಿ ಜಾಗವಿದೆ. ವಿದ್ಯಾರ್ಥಿಗಳು ದೊರೆತ ಮೇಲೆ ಉಪಾಧ್ಯಾಯಿನಿಯರನ್ನು ತೆಗೆದುಕೊಳ್ಳಬೇಕು. ಶಾಲೆ ತೆರೆಯಲು ಇನ್ನೊಂದು ತಿಂಗಳು ಇದೆ. ಮಕ್ಕಳು ಚೇತರಿಸಿಕೊಂಡ ಮೇಲೆ ನೀನೂ ಕೆಲವು ದಿನ ಬಾ. ಇನ್ನೂ ಹೆಚ್ಚಿನ ಪರಿಕರಗಳು ಬೇಕಾಗಬಹುದು. ಸರಕಾರದಿಂದ ಧನ ಸಹಾಯ ಪಡೆಯುವುದೇ? ಅಥವಾ ಧನಿಕರಿಂದ ವಂತಿಗೆ ಪಡೆಯುವುದೆ? ಈ ವಿಚಾರಗಳನ್ನು ಇನ್ನೂ ನಿರ್ಧರಿಸಿಲ್ಲ. ಒಬ್ಬ ಆಯಾ ಬೇಕಾಗುತ್ತೆ. ಶಾಲೆಗೆ ಬೇಕಾದ ಕಾಗದ ಪತ್ರಗಳು, ದಸ್ತಾವೇಜುಗಳು ಇಟ್ಟುಕೊಳ್ಳಲು ಬೀರು ಬೇಕಾಗುತ್ತೆ. ವಿದ್ಯಾ ಇಲಾಖೆಯ ನಿರ್ದೇಶಕರನ್ನು ಕಂಡು ಬರಬೇಕು. ಇದಕ್ಕೆಲ್ಲಾ ನೀನೂ ಕೂಡಿದರೆ ತುಂಬ ಸಹಾಯವಾಗುತ್ತೆ. ಹೇಗೂ ಶಾಲೆ ಶುರುವಾಗುವವರೆಗೆ ನೀನೂ 'ಫ್ರೀಬರ್ಡ್' ಎಂಧು ಎಲ್ಲಾ ವಿವರಣೆಯನ್ನೂ ಒಂದೇ ಬಾರಿಗೆ ಮುಂದಿಟ್ಟಳು ಮೋಹಿನಿ.

"ಒಳ್ಳೆಯದು; ಕೂಡೋಣ. ಶಾಲಾ ಸಮಿತಿಯಲ್ಲಿ ಒಂದಿಬ್ಬರು ನುರಿತ ಹಿರಿಯರಿರುವುದು ಒಳ್ಳೆಯದು. ರಿಟೈರ್ಡ್ ಸ್ಕೂಲ್ ಮಾಸ್ಟರ್ ಇದ್ದರೆ ನೋಡಿ."

"ಸ್ಕೂಲ್ ಮಾಸ್ಟರ್ ಬೇಡ; ಮಿಸ್ಟ್ರೆಸ್ ಬೇಕು!"

ಮೂವರ ಮುಖದಲ್ಲೂ ನಗೆಯ ಬುಗ್ಗೆ ಚಿಮ್ಮಿತು.

ಅನಂತರ ಗೋಪು ವಿಚಾರ ಬಂತು.

"ಅವನಿಂದ ಕಾಗದ ಬಂದ ಬೆಳಿಗ್ಗೆಯೇ ಕಾಲೋನಿ ಬಿಟ್ಟುಬಿಟ್ಟೆ. ಇಂತಹವರಿಂದಲೇ ನಮ್ಮ ದೇಶ ಹಾಳಾಯ್ತು; ಸಂಸ್ಕೃತಿ ಹಾಳಾಯ್ತು. ನಮ್ಮ ಮಾನ ಮೂರಾ ಬಟ್ಟೆಯಾಯ್ತು...." ಗದ್ಗದಿತ ದನಿ ಉತ್ಕಂಠಿತವಾಯಿತು....ಮೋಹಿನಿ ಬಿಕ್ಕಿದಳು.

"ಹೋಗಲಿ ಬಿಡು ಪೀಡೆ ತೊಲಗಿತಲ್ಲ. ಮತ್ತೇಕೆ ದುಃಖ? ಇನ್ನಾದರೂ ಗಮ್ಯಸ್ಥಾನದ ಗುರಿ ಹಿಡಿದರಾಯಿತು."

ಒಂದೇ ಗಳಿಗೆಯಲ್ಲಿ ತನ್ನನ್ನು ತಾನು ಸಾವರಿಸಿಕೊಂಡು ನುಡಿದಳು "ನನ್ನ ಜನ್ಮ ನಕ್ಷತ್ರವೇ ತುಂಬಾ ಕೆಟ್ಟದ್ದಿರಬಹುದು."

"ನಿನಗೆ ನಿನ್ನಣ್ಣ ಆಸ್ಪತ್ರೆಗೆ ಸೇರಿದ್ದು ತಿಳಿಯಿತೇ ಮೋಹಿನೀ?"

"ಇಲ್ಲ ಕಮಲೂ! ಏನಾಗಿದೆ? ಯಾವಾಗ ಸೇರಿದ್ದು?"

"ಹಾರ್ಟ್ ಅಟ್ಯಾಕ್ ಅಂತೆ! ಬೆಳಿಗ್ಗೆ ಅಮ್ಮನನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗಿದ್ದಾಗ ತಿಳಿಯಿತು. ಸ್ವಲ್ಪ ಸೀರಿಯಸ್ಸೇ ಇರಬೇಕು!"

"ಹೌದೇ?"

"ಪಾಪ, ಮನಸ್ಸಿಗಾದ ಅಘಾತ ಎನಿಸುತ್ತೆ!"

"ಹೌದು....ಹೌದು! ಇಲ್ಲಿಂದ ಹಿಂದಿರುಗುವಾಗ ಆಸ್ಪತ್ರೆಗೆ ಹೋಗೋಣವೇ? ಏನು ಹೇಳುತ್ತೀ ಸುಮನಾ?" ಕೇಳಿದಳು ಮೋಹಿನಿ.

"ಆಗಲಿ, ಅದಕ್ಕೇನು? ನಾವು ನಾಲ್ಕು ಗಂಟೆಗೆ ಹೊರಟರೆ ಸರಿಯಾಗುತ್ತೆ."

"ನೀನು ಬೆಳಿಗ್ಗೆ ನೋಡಿದೆಯಾ?"

"ಸುಮ್ಮನೆ ಹಣಿಕಿ ನೋಡಿ ಹೊರಬಂದೆ."

ಆಗಲೇ ಗಂಟೆ ಮೂರೂವರೆ. ಕಮಲೂ ಚಹಾ ಬಿಸ್ಕತ್ ನೀಡಿ ಆತಿಥ್ಯ ನಡೆಸಿದಳು. ನಾಲ್ಕು ಗಂಟೆಗೆ ಸರಿಯಾಗಿ ಇಬ್ಬರೂ ಆಸ್ಪತ್ರೆಯ ಕಡೆ ಹೊರಟರು.

ಒಬ್ಬಳೇ ತಂಗಿಗೆ ಅಣ್ಣ ತುಂಬ ಕಾಹಿಲೆಯಾಗಿದ್ದರೂ ತಿಳಿಸಲಿಲ್ಲವಲ್ಲಾ ಎಂಬ ವೇದನೆ ಮನದಲ್ಲಿ. ಬಾಲ್ಯ ದಿನಗಳ ಸಂತೋಷ-ಚೆಲ್ಲಾಟಗಳನ್ನು ಮನದಲ್ಲೇ ನೆನೆದು ಚಿಂತಿತಳಾದಳು ಮೋಹಿನಿ. ಜೀವನ ಕುಸುಮ ದಿನ ದಿನಕ್ಕೆ ಅರಳಬೇಕೇ ಹೊರತು ಮುದುಡಬಾರದು ಎಂದು ಎದೆಯ ಹಕ್ಕಿ ಕೂಗಿ ಹೇಳಿತು. ಅದೇ ದನಿ ಪುನಃ ಪುನಃ ಕಿವಿಯ ಸನಿಹದಲ್ಲಿಯೇ ಮೊಳಗಿತು ಅಶರೀರವಾಣಿಯಾಗಿ.

ಬಸ್ಸು ಆಸ್ಪತ್ರೆಯ ಎದುರಿನ ರಸ್ತೆಯಲ್ಲಿ ನಿಂತಿತು. ಇಬ್ಬರೂ ಇಳಿದು ಆಸ್ಪತ್ರೆಯ ಮೆಟ್ಟಲು ಹತ್ತಿದರು. ಒಳಹೋಗುತ್ತಲೂ ಅಶೋಕ-ಶಶಿಯರ ದರ್ಶನವಾಯಿತು. ಗುರುತಿನವರೊಬ್ಬರು "ಹುಡುಗರನ್ನು ಬೇಲ್ ಮೇಲೆ ಬಿಟ್ಟಿದ್ದಾರೆ" ಎಂದರು. ಆಗಲೇ ಸುಮನಳ ತಾಯಿ ಅಲ್ಲಿದ್ದಾರೆ.

"ರಘು ತುಂಬ ಸೀರಿಯಸ್."

ಸುದ್ದಿ ಮುಟ್ಟಿಸಿದರು ಸುಮನಳ ತಾಯಿ. ಕೂಡಲೇ ಇವರಿಬ್ಬರೂ ಒಳ ಹೋದರು. ಮೋಹಿನಿ ಹಾಸಿಗೆಯ ಬಳಿ ಹೋಗುತ್ತಲೂ ಅವನು ಕಣ್ಣುಗಳನ್ನು ಬಿರಿಬಿರಿ ಬಿಟ್ಟು ನೋಡಿ "ಮೋಹಿನಿ! ಮೋಹಿನಿ!" ಎಂದ. ಅದೇ ಕ್ಷಣದಲ್ಲಿ ದೊಡ್ಡದಾದ ಉಸಿರೊಡನೆ ಪ್ರಾಣವನ್ನೂ ಬಿಟ್ಟ.

ಆಸ್ಪತ್ರೆಯಿಂದ ಮನೆಗೆ ಹೆಣ ಸಾಗಿಸುವವರೆಗೆ ಅಲ್ಲಿಯೇ ಇದ್ದ ಇಬ್ಬರೂ

ಹೊರಟು ಮನೆ ಮುಟ್ಟಿದಾಗ ರಾತ್ರಿ ಏಳು ಗಂಟೆ. ಮಕ್ಕಳಿಗೆ ಏಕೆ ಬರಲಿಲ್ಲ ಎಂಬ ಗಾಬರಿ. ಮೋಹಿನಿಗೆ ಕೊನೆಗಾಲದಲ್ಲಿ ನನ್ನನ್ನು ಗುರುತಿಸಿದ ಎಂಬ ಸಂತಸ ದೊಂದಿಗೆ ವ್ಯಸನವೂ ಬೆರೆಯಿತು.

ಮರುದಿನದ ಶವ ಸಂಸ್ಕಾರದಲ್ಲಿಯೂ ಭಾಗವಹಿಸಿ ಬಂದರು ಗೆಳತಿಯರು ಕೂಡಿ.

## ೨೬

ಕಮಲಾ, ಸುಮನಾ, ಮೋಹಿನಿಯರೊಟ್ಟಾಗಿಯೇ ಆಫೀಸಿನ ಮೆಟ್ಟಿಲು ಹತ್ತಿದರು.

ಮೂರನೆಯ ಮಹಡಿಯಲ್ಲಿ ವಿದ್ಯಾ ಇಲಾಖೆಯ ನಿರ್ದೇಶಕರ ಕಛೇರಿ. ಗಂಟೆ ಹತ್ತುವರೆಯ ಸಮಯ. ಆಫೀಸಿನ ಚಟುವಟಿಕೆ ಆಗಲೇ ಶುರುವಾಗಿದೆ. ಹೋಗಿ ಬರುವವರಿಂದ ವರಾಂಡದಲ್ಲಿ ಅತೀವ ಜನಸಂದಣಿ.

ಕಛೇರಿಯ ಬಾಗಿಲ ಮೇಲೆ "ನಿರ್ದೇಶಕರು ಡಾ॥ ಬಸಂತ್" ಎಂಬ ತಲೆಪಟ್ಟಿಯಿತ್ತು.

ಜವಾನ ಕೇಳಿದ "ಏನಮ್ಮಾ?"

"ನಿರ್ದೇಶಕರನ್ನು ನೋಡಬೇಕು."

"ನಿಮ್ಮ ಗುರುತಿನ ಚೀಟಿಯನ್ನು ಕೊಡಿರಿ."

ಮೂವರೂ ತಮ್ಮ ತಮ್ಮ ಗುರುತಿನ ಚೀಟಿಯನ್ನು ಅವನ ಕೈಗೆ ನೀಡಿದರು. ಅವನು ಚೀಟಿಗಳನ್ನು ಒಳಗೊಯ್ದು ಕೊಟ್ಟು ನಿರ್ದೇಶಕರ ಅಪ್ಪಣೆಯ ಮೇರೆಗೆ ಅವರನ್ನು ಒಳಗಡೆ ಕರೆದೊಯ್ದ. ಎಣ್ಣೆಯೊರೆದಂತೆ ಥಳಥಳಿಸುತ್ತಿದ್ದ ಹರವಾದ ಮೇಜು, ಅದರ ಸುತ್ತಲೂ ಸಾಲು ಕುರ್ಚಿಗಳು, ಎದುರಿನ ಕುರ್ಚಿಯ ಮೇಲೆ ಕುಳಿತು ನಿರ್ದೇಶಕ ತಲೆಬಾಗಿ ಫೈಲುಗಳ ಮೇಲೆ ಬರೆಯುತ್ತಿದ್ದಾನೆ. ಒಂದೆರಡು ಗಳಿಗೆಯ ನಂತರ ಆತ ತಲೆಯೆತ್ತಿ ನೋಡಿದ.

ಮೋಹಿನಿಯೂ ನೋಡುತ್ತಲೇ ಇದ್ದಾಳೆ. ಆತ ತನ್ನ ವಸಂತನೇ ಹೌದು ಎಂದು ಚೀರುತ್ತಿದೆ ಮಾನಸ ಪಕ್ಷಿ, ಹೃದಯ ಮೃದಂಗ ಆನಂದ-ಆಶ್ಚರ್ಯ-ಉದ್ವೇಗಗಳಿಂದ ದಡದಡನೆ ಮಿಡಿಯಿತು, ವ್ಯಾಪ್ತಿಗೆ ಮೀರಿ. ಆಗ ಸಣ್ಣಗೆ ತಾಮ್ರವರ್ಣವಿದ್ದ ಅವನು ಈಗ ಮೈತುಂಬಿ ಕೆಂಪುಬಣ್ಣದ ಸುಂದರ ಪುರುಷ

ನಾಗಿದ್ದಾನೆ. ಅಂದಿನ ತಲೆಗೂದಲು ಮೊಟಕು. ಇಂದಿನದು ಕತ್ತಿನವರೆಗೂ ಇಳಿಬಿಟ್ಟ ಗುಂಗುರು ಗುಂಗುರು ಕೂದಲು.

ತಲೆಯೆತ್ತಿ ನೋಡಿದವನೇ ಒಂದೆರಡು ಸಲ ಕಣ್ಮುಚ್ಚಿ ತನ್ನ ನೋವನ್ನು ತಾನೇ ನುಂಗಿಕೊಂಡ. ಚೀಟಿಯಲ್ಲೂ ಮೋಹಿನಿಯ ಹೆಸರಿದೆ. ಎದುರಿಗೂ ನಿಂತಿದ್ದಾಳೆ. ಆದರೆ ಲಾವಣ್ಯ ರಹಿತ ಒಣಮೂಳೆಯ ಮಾನವಿ.

ಕೆಲವು ನಿಮಿಷ ನೋವು-ನಲಿವುಗಳೊಡನೆ ರುದ್ರಮೌನವಾಗಿ ಉರುಳಿದುವು. ಅನಂತರ ಬಸಂತ್ ತನ್ನನ್ನು ತಾನೇ ಸುಧಾರಿಸಿಕೊಂಡು ಅಂದ,

"ದಯವಿಟ್ಟು ಕುಳಿತುಕೊಳ್ಳಿ."

ಮೂವರೂ ಕುಳಿತುಕೊಂಡರು.

ಯಾರು ಮೊದಲು ಮಾತಾಡಬೇಕು? ಹೇಗೆ ಮಾತಾಡಬೇಕು? ಎಲ್ಲಿಂದ ಪ್ರಾರಂಭಿಸಬೇಕು? ಇದು ತಮ್ಮ ಮುಂದಿರುವ ಪ್ರಶ್ನೆ.

ಕಮಲಾ, ಸುಮನಾ ಇಬ್ಬರೂ ಆ ಮಹೂರ್ತದಲ್ಲಿ ಅವರಿಬ್ಬರ ಮನಃಪ್ರಾಣಗಳಲ್ಲಿನ ಕೋಲಾಹಲವನ್ನು ಕಂಡುಕೊಂಡಿದ್ದರು. ಒಂದೆರಡು ಗಳಿಗೆ ಪ್ರಯತ್ನಿಸಿದರೂ ಬಾಯ್ದೆರೆಯಲಾಗಲಿಲ್ಲ.

ಅನಂತರ ಬಸಂತನೇ ಮೌನ ಮುರಿದ.

"ಈಗ ನೀವೆಲ್ಲಾ ಬಂದ ಸಮಾಚಾರವೇನು?"

"ನಾವೊಂದು ಶಾಲೆ ನಡೆಸಲು ಉದ್ದೇಶಿಸಿದ್ದೇವೆ. ಅದರ ಪೂರ್ಣ ಮಾಹಿತಿಯನ್ನೂ ತಂದಿದ್ದೇವೆ. ನಮಗೆ ಸರಕಾರದ ಅನುಮತಿ ಅಥವಾ ಲೈಸನ್ಸ್ ಬೇಕು...." ಎಂದಳು ಸುಮನಾ.

"ನಿರ್ದೇಶನವೂ ನಮಗೆ ಅಗತ್ಯ" ಕಮಲ ನುಡಿದಳು.

ಅಷ್ಟರಲ್ಲಿ ಮೋಹಿನಿ ಕಣ್ಣುಗಳಲ್ಲಿ ಮೂಡಿದ್ದ ಕಂಬನಿಯನ್ನು ತೋರಗೊಡದಿರಲು ಮುಖವನ್ನೇ ಒರಿಸಿಕೊಳ್ಳತೊಡಗಿದ್ದಾಳೆ.

"ಏನಾಯಿತು ಮೋಹಿನೀ?" ಕೇಳಿದಳು ಸುಮನಾ.

ಮೋಹಿನಿ ಏನೋ ಹೇಳಬೇಕು, ಹೇಳಲಾರಳು. ಎದೆಯಾಳದಲ್ಲಿ ಅತೀವ ಕೊರೆತ. ಎಲ್ಲಿಂದಲೋ ಒವಗಿ ಬಂದ ಕಾಣದ ಕೈಗಳು ಗಂಟಲನ್ನು ಅದುಮುತ್ತಿವೆ. ಮಾನಸಿಕ ತುಮುಲ ಬೌದ್ಧಿಕ ತುಮುಲ ತನ್ನ ಅಸ್ತಿತ್ವವನ್ನೇ ಸಮೂಲವಾಗಿ ಅಲ್ಲಾಡಿಸಿತ್ತು. ಮೊಣಕೈಯನ್ನು ಮೇಜಿನ ಮೇಲೆ ಊರಿ ಗಲ್ಲಕ್ಕೆ ಆಶ್ರಯವಿತ್ತು ಚಿಂತಾಕ್ರಾಂತಳಾದಳು.

ಡಾ॥ ಬಸಂತ್ ಅವಳ ಮನಸ್ಥಿತಿಯನ್ನರಿತು ತಾನೇ ಮಾತಾಡತೊಡಗಿದ

"ನಮ್ಮದು ಹದಿನೈದು ವರ್ಷಗಳ ನಂತರದ ಭೇಟಿ....ಒಂದಾನೊಂದು ಕಾಲದಲ್ಲಿ ನಾವಿಬ್ಬರೂ ತುಂಬ ಸ್ನೇಹಿತರಾಗಿದ್ದು ಭವ್ಯ ಭವಿಷ್ಯದ ಕನಸನ್ನು ಕಟ್ಟಿಕೊಂಡಿದ್ದೆವು. ನಾನು ವಿದ್ಯಾಭ್ಯಾಸಕ್ಕೆಂದು ಕಲಿಕತ್ತೆ ಮತ್ತು ಶಾಂತಿನಿಕೇತನಗಳಿಗೆ ಹೊರಟುಹೋದೆ. ದುರದೃಷ್ಟವಶಾತ್ ಇವಳ ತಂದೆ ತಾಯಿಗಳು ಗತಿಸಿದರು. ಅನಂತರದ ಬೆಳವಣಿಗೆಯೆಲ್ಲಾ ನಿಮಗೆ ಗೊತ್ತು....ನಾನು ನನ್ನ ತಂದೆತಾಯಿಯರನ್ನು ಅಲ್ಲಿಗೇ ಕರೆಸಿಕೊಂಡೆ. ಕಾಲಾಂತರದಲ್ಲಿ ಅವರು ಅಲ್ಲೇ ನಿಧನರಾದರು ಕೂಡ. ನಾನು ವಿದೇಶಗಳಲ್ಲಿ ವಿದ್ಯಮಾನಗಳನ್ನರಿತು ಆಫೀಸನ್ನು ಸರಿಹೊಂದಿಸಿ ಕೊಳ್ಳುವುದ ರಲ್ಲಿಯೇ ಸಮಯ ಕಳೆಯಿತು...." ಎಂದು ಅವನು ಮೋಹಿನಿಯನ್ನು ಕುರಿತು ಸಾವಧಾನದಿಂದ ನುಡಿದ "ನಿನ್ನನ್ನು ನೋಡುವ ಯೋಚನೆಯೂ ಬಂದಿತ್ತು. ಇಲ್ಲಿ ನನ್ನ ಗುರುತಿನವರು ಯಾರೂ ಇರಲಿಲ್ಲವಾದುದರಿಂದ ನಿನ್ನ ವಿಷಯ ಏನೇನೂ ತಿಳಿಯಲಿಲ್ಲ. ಸುಖವಾಗಿದ್ದೀ ತಾನೆ ಮೋಹಿನಿ?"

ಅವಳು ಅಧೋಮುಖಿಯಾದಳು ಪ್ರಯತ್ನಿಸಿದರೂ ಮಾತುಗಳು ಹೊರಡಲಿಲ್ಲ.

ಎದೆಯಾಳದಲ್ಲಿ ಭಾವತರಂಗಿಣಿಯು ರುದ್ರತಾಂಡವ ನೃತ್ಯ ಗೈವ ನೂಪುರಗಳ ಟಿಂಟಣಿ ನಾದ ಯಾರಿಗೂ ಕೇಳಿಸುತ್ತಿಲ್ಲವಷ್ಟೆ....? ಎಂದುಕೊಂಡಳಾ ಲಲನೆ.

ಆಗ....ಆಗ ಕಮಲಾ ಸುಮನಾ ಮೋಹಿನಿಯ ಕತೆಯನ್ನು ಕರುಣಾರ್ದ್ರ ಕಂಠದಿಂದ ವಿವರಿಸಿದರು. "ವಸಂತ್ ಬಂಗಾಲಿಯನ್ನು ಮದುವೆಯಾಗಿದ್ದಾನೆ. ಇನ್ನು ಅವನನ್ನು ಮರೆತುಬಿಡು" ಎಂದು ಹೇಳಿದ್ದಾರೆ. ನಿಮ್ಮ ತಂದೆತಾಯಿಗಳೂ ಕಲ್ಕತ್ತಕ್ಕೆ ಹೋಗಿದ್ದರಿಂದ ಇವಳಿಗೆ ಏನೇನೂ ತಿಳಿಯಲಿಲ್ಲ. ಅತ್ತಿಗೆ ಅಣ್ಣನ ಕಾಟ ತಪ್ಪಿಸಿಕೊಳ್ಳಲು ಮದುವೆಯಾಗಲೇಬೇಕಾಯ್ತು; ಮುಂದೆ ಬಾಳೊಂದು ಗೋಳು.... ರಾಣಾರಂಪ.... ಮಾನ ಮೂರಾಬಟ್ಟೆಯಾಯ್ತು. ಮೂರು ಚಿನ್ನದಂತಹ ಹೆಣ್ಣು ಮಕ್ಕಳಿದ್ದಾರೆ. ಮಕ್ಕಳ ಹೊಣೆ ಹೊತ್ತುದರಿಂದ ಬಾಲವಾಡಿ ನಡೆಸುತ್ತಿದ್ದಾಳೆ....

ಅವರು ಇನ್ನೂ ಹೇಳುತ್ತಲೇ ಇದ್ದಾರೆ. ಅವನು ಎಷ್ಟು ಕೇಳಿದನೋ....ಎಷ್ಟು ಬಿಟ್ಟನೋ ಮುಖಬಿಂಬ ಭಾವೋದ್ವೇಗದಿಂದ ಕೆಂಪು ಕೆಂಪು ತಳೆದಿತ್ತು. ಆದರೂ, ಉದ್ವಿಗ್ನವಾಗದೇ ಸ್ವಲ್ಪಹೊತ್ತು ಸುಮ್ಮನೆ ಕುಳಿತಿದ್ದು ಅನಂತರ ನುಡಿದ "ಮೋಹಿನಿ ! ದುಃಖಿಸಬೇಡ. ಜೀವನದಲ್ಲಿ ಏನೇನು ಆಗಬೇಕೋ ಅದು ಆಗಿಯೇ ತೀರುತ್ತೆ. ನೀನು ಹೆಣ್ಣಾಗಿ, ಅಬಲೆಯಾಗಿ ಅಣ್ಣ ಅತ್ತಿಗೆಯರ ಒತ್ತಾಯಕ್ಕೆ ಮಣಿಯಲೇ ಬೇಕಾಯ್ತು ಮಣಿದೆ.... ನಾನು ಗಂಡಸು. ಯಾರ ಒತ್ತಡಕ್ಕೂ

ಮಣಿಯುವ ಅಗತ್ಯವಿರಲಿಲ್ಲ. ನಿನ್ನ ಮದುವೆಯಾದ ಸುದ್ದಿ ತಿಳಿದು ಅಪ್ಪ ಅಮ್ಮ ನನಗೆ ಬೇರೆ ಮದುವೆಯಾಗಲು ಒತ್ತಾಯಿಸಿದರು ಕೂಡಾ. ನಾನು 'ಇಲ್ಲ' ಎಂಬ ಒಂದೇ ಶಬ್ದದಿಂದ ನಿರಾಕರಿಸಿದೆ. ಆದ್ದರಿಂದ ನಾನು ಬ್ರಹ್ಮಚಾರಿಯಾಗಿಯೇ ಉಳಿದೆ. ಇನ್ನೊಂದು, ನಾನು ಕಲ್ಕತ್ತಾಕ್ಕೆ ಹೋದನಂತರ ನನ್ನ ಹೆಸರು 'ಬಸಂತ್' ಎಂದು ಮಾರ್ಪಾಡಾಯಿತು. ಈಗ ಬಳಕೆಯಲ್ಲಿರುವುದು ಅದೇ. ನನ್ನ ಜೀವನ ವನ್ನೇ ದೇಶದ ವಿದ್ಯಾಕ್ಷೇತ್ರಕ್ಕೆ ಮುಡಿಪಾಗಿಟ್ಟಿರುವೆ. ಮುಂದೆ ನಿನಗೆ ಯಾವ ಸಹಾಯ ಬೇಕಾದರೂ ನಿಸ್ಸಂಕೋಚದಿಂದ ಕೇಳು. ಎಲ್ಲಾ ರೀತಿಯಿಂದಲೂ ಸಹಾಯ ಮಾಡುವೆ."

ಮೋಹಿನಿ ಮುಖ ಕಣ್ಣುಗಳನ್ನು ಒರಿಸಿಕೊಂಡು ತನ್ನನ್ನು ತಾನು ಸಾವರಿಸಿ ಕೊಳ್ಳುತ್ತ ನುಡಿದಳು "ವಸಂತ್! ನಿಜಕ್ಕೂ ನನ್ನ ಬಾಳೊಂದು ನರಕ ಕೂಪಕ್ಕೆ ತಳ್ಳಿದ ಅಣ್ಣ ಅವಮಾನ ಪ್ರಸಂಗಕ್ಕೆ ಸಿಕ್ಕಿ ಹೃದಯಾಘಾತದಿಂದ ಮೊನ್ನೆಯಷ್ಟೇ ತೀರಿಕೊಂಡ. ಐಶ್ವರ್ಯದ ಅಮಲಿನಲ್ಲಿ ದುರ್ವ್ಯವಹಾರ ನಡೆಸಿ ಸಿಕ್ಕಿಕೊಂಡಿದ್ದ ಎಂಬ ಕತೆಯೂ ಈಗೀಗ ಕೇಳಿ ಬರುತ್ತಿದೆ....ಹೋಗಲಿ, ಬಿಡು. ನಾನು ಅವನ ಮನೆಯ ಹೊಸ್ತಿಲು ದಾಟಿದಾಗಿನಿಂದ ಆ ಮನೆಗೆ ಕಾಲಿಡಲಿಲ್ಲ. ನನ್ನ ಬದುಕು ಮೂವರು ಹೆಣ್ಣು ಮಕ್ಕಳಿಗಾಗಿ ಅನಿವಾರ್ಯ....ಬದುಕಿದ್ದೇನೆ. ಇಲ್ಲದಿದ್ದರೆ ಎಂದೋ ಆತ್ಮಹತ್ಯೆ ಮಾಡಿಕೊಳ್ಳುತಿದ್ದೆ...."

ಅದುವರೆಗೆ ತಡೆಹಿಡಿದ ದುಃಖದ ಕಟ್ಟೆಯೊಡೆಯಿತು. ಎಡಬಲಗಳಲ್ಲಿ ಮಂಡಿಸಿದ್ದ ಸುಮನಾ ಕಮಲಾ ಸಂತೈಸಿದರು. ಆ ಕರುಣಾಜನಕ ದೃಶ್ಯ ಬಸಂತನ ಕಣ್ಣುಗಳನ್ನು ತೊಯ್ಯಿಸಿದುವೇನೋ ಕಣ್ಣುಗಳೆರಡೂ ರಂಗುರಂಗು ತಳೆದುವು. ಅವಳು ದುಃಖಶಮನ ಹೊಂದುವವರೆಗೂ ಸುಮ್ಮನಿದ್ದು ಅನಂತರ ನುಡಿದ "ದೈವೇಚ್ಛೆ ಹಾಗಿತ್ತು. ನೀನು ಅದಕ್ಕಾಗಿ ಖಂಡಿತ ದುಃಖಿಸಬೇಡ. ನಿನ್ನ ಮೂವರು ಹೆಣ್ಣುಮಕ್ಕಳನ್ನೂ ನಾನು ದತ್ತು ತೆಗೆದುಕೊಳ್ಳುವೆ. ಅವರ ಸಂಪೂರ್ಣ ಭಾರ ನನ್ನ ಮೇಲಿರಲಿ. ಯಾವಾಗಾದರೊಮ್ಮೆ ಶಾಲೆಗೆ ಬಂದು ಹೋಗುವೆ. ಮುಂದೆ ನಾನು ವಿದ್ಯಾನಿಕೇತನವನ್ನು ನಡೆಸಬೇಕೆಂದಿರುವೆ. ಅದಕ್ಕಾಗಿ ಅತ್ಯಂತ ವಿಶಾಲವಾದ ನಿವೇಶನ ಕೊಂಡುಕೊಳ್ಳುವ ಉದ್ದೇಶವಿದೆ. ನೋಡೋಣ, ಮುಂದೇನಾಗುತ್ತೋ, ಸಧ್ಯಕ್ಕಂತೂ ನಿನಗೆ ಎಲ್ಲಾ ನೆರವನ್ನೂ ನೀಡುವೆ....ನಿನಗೆ ದೇವರು ಒಳ್ಳೆಯದು ಮಾಡಲಿ. ಹೋಗಿ ಬಾ. ನಿನ್ನ ಅಣ್ಣನ ಸ್ಥಾನದಲ್ಲಿ ನಾನಿರುವೆ ಎಂದು ಭಾವಿಸಿಕೋ...."

ಮೋಹಿನಿ ಬಾಯಿ ಬಿಟ್ಟು ಏನೂ ಹೇಳಲಿಲ್ಲವಾದರೂ ತನ್ನ

ದುರದೃಷ್ಟವನ್ನು ಮನದಲ್ಲೇ ಹಳಿದುಕೊಂಡಳು. ಮೂವರೂ ಎದ್ದು ನಿಂತರು. ಅವನೂ ಎದ್ದು ನಿಂತು ಕೊನೆಯ ಮಾತಾಗಿ "ಇನ್ನು ದುಃಖಿಸಬೇಡ ಆಯಿತೇ?" ಎಂದ.

ಅವಳ ಮುಖಬಿಂಬ ಮಳೆ ಬಿಸಿಲಾಯಿತು.

"ಬರ್ತೀವಿ ಸರ್!"

ಅವರಿಬ್ಬರೂ ಕೈ ಜೋಡಿಸಿದರು. ಮೋಹಿನಿಗೆ ಏನೆನ್ನಬೇಕೋ ತಿಳಿಯಲಿಲ್ಲ. ಒಂದೆರಡು ಕ್ಷಣ ಯೋಚಿಸಿ "ಕೊನೆಗಾಲದಲ್ಲಾದರೂ ನೀನು ಆಪದ್ಬಂಧು ಆದೆಯಲ್ಲಾ ಅದೇ ಸಾಕು. ನನ್ನ ಶಾಲೆಗೆ ಎಂದು ಬರುತ್ತಿ?" ಎಂದಳು.

"ಲೈಸನ್ಸ್ ತಯಾರಾಗಲಿ. ಈ ವಾರದಲ್ಲೇ ಎಂದಾದರೂ ಬೆಳಗಿನ ಹೊತ್ತು ಬರುವೆ."

"ನಮಸ್ಕಾರ!"

ಇಬ್ಬರೂ ನಕ್ಕು ಬಿಟ್ಟರು.

ಅನಂತರ ಅವನು ಬಾಗಿಲವರೆಗೂ ಕಳುಹಿಸಿ ಅವಳ ತಲೆಯ ಮೇಲೆ ಕೈಯಿಟ್ಟು ನೇವರಿಸಿ ಬೀಳ್ಕೊಟ್ಟ. ಭಾರವಾದ ಹೆಜ್ಜೆಗಳಿಂದ ಹಿಂದಿರುಗಿದಳು ಮೋಹಿನಿ. ಮೂರು ಮಹಡಿಗಳ ಮೆಟ್ಟಿಲುಗಳನ್ನು ಇಳಿಯುವಾಗ ಹೆಜ್ಜೆಗಳು ತೊಡರುತ್ತಿದ್ದುವು. ಎಲ್ಲಿ ಬೀಳುವೆನೋ ಎನಿಸಿದಾಗಲೇ ಗೆಳತಿಯರಿಬ್ಬರೂ ಎರಡೂ ಕೈಗಳನ್ನೂ ಹಿಡಿದುಕೊಂಡು ಆಧಾರ ನೀಡಿದರು. ಮನಸ್ಸು ತಹತಹಿಸುತಿದ್ದರೆ ಹೃದಯ ಮೌನಭಾರದಿಂದ ರೋದಿಸುತ್ತಿತ್ತು. ಮುಖಬಿಂಬದ ಭಾವಶಾಂತಿ ಯಾವ ಸಂವೇದನೆಗೆ ಆಧಾರವೋ....

## ೨೭

ಡಾ॥ ಬಸಂತ್ ಆಗಮಿಸಿದಾಗ ಇನ್ನೂ ಒಂಭತ್ತರ ಸಮಯ.

ಜಗಲಿಯ ಬೆಂಚಿನ ಮೇಲೆ ಸಾಲಾಗಿ ಕುಳಿತು ಓದುತ್ತಿದ್ದ ಐವರು ಮಕ್ಕಳೂ ತಾಯಂದಿರು ಹೇಳಿದ್ದ ಮುಖಚರ್ಯೆಯನ್ನು ನೆನಪಿಸಿಕೊಂಡು "ಇವರೇ ಇರಬೇಕು" ಎಂದು ತಮ್ಮತಮ್ಮೊಳಗೇ ಮಾತಾಡಿಕೊಳ್ಳುತ್ತ ಮುಂಬಾಗಿಲನ್ನು ತೆರೆದು ತಾಯಂದಿರನ್ನು ಕೂಗಿ ಕರೆದರು. ಇಬ್ಬರೂ

ಹೊರಬಂದು ನೋಡುತ್ತಾರೆ. ಬಸಂತ್! ಆ ಕೂಡಲೇ ಸಂತೋಷದಿಂದ ಬರಮಾಡಿಕೊಂಡರು. ಹೃದಯವೇ ಬಾಯ್ಗೆ ಬಂದಷ್ಟು ಆನಂದ ಎಲ್ಲರಿಗೂ.

ವಸಂತನ ಕಣ್ಣುಗಳು ಒಂದೆರಡು ಗಳಿಗೆಯೊಳಗಾಗಿ ಅಲ್ಲಿನ ಸ್ಥಿತಿಗತಿಯನ್ನು ಅಳೆದುವು. ಹೃದಯ ಕಷ್ಟ ಸುಖಗಳ ಆಗರವಾಯಿತು. “ಗಿಡವಾಗದೇ ಮರ ವಾಗುವುದಿಲ್ಲ. ಕಷ್ಟಪಡಿ, ಮುಂದೆ ಒಳ್ಳೆಯದಾಗುತ್ತೆ. ನಾನು ಶಾಲೆ ತೆರೆದಾಗ ನಿಮಗೆಲ್ಲಾ ಏನೇನು ಅನುಕೂಲಪಡಿಸಬಹುದೋ ನೋಡೋಣ” ಎಂದ. ಮಕ್ಕಳ ಪರಿಚಯ ಮಾಡಿಕೊಟ್ಟಳು ಮೋಹಿನಿ. ಅದೇ ಬೆಂಚಿನ ಮೇಲೆ ಕುಳಿತು ಮಕ್ಕಳನ್ನು ಎಡಬಲಗಳಲ್ಲಿ ಆತು ಹಿಡಿದು ಮುದ್ದಿನಿಂದ ನುಡಿದ “ಮುಂದೆ ದೇಶಕ್ಕೆ ಮಾದರಿಯಾಗುವಂತೆ ಬಾಳಬೇಕು. ಒಳಿತು ಕೆಡಕುಗಳನ್ನು ವಿಮರ್ಶೆಮಾಡದೆ ಯಾವ ಕೆಲಸವನ್ನೂ ಕೈಕೊಳ್ಳಬಾರದು.”

ಡಾ॥ ವಸಂತ್ ಸುಮನಾ ಮೋಹಿನಿಯರೊಡನೆ ಶಾಲೆ ಮತ್ತು ಶಾಲೆಯ ಆವರಣವನ್ನೆಲ್ಲಾ ಒಂದು ಸುತ್ತು ಹಾಕಿ “ಇಲ್ಲಿ ಪ್ರೈಮರಿಯವರೆಗೆ ನಡೆಸಬಹುದು ಇದರ ಉನ್ನತಿಗೆ ನಾನು ನೆರವು ನೀಡುವೆ” ಎಂದು ಸಾಂತ್ವನದ ನಾಲ್ಕು ಮಾತಾಡಿ ಹೊರಟ.

“ಸರ್ ನೀವು ಕಾಫಿ ತೆಗೆದುಕೊಳ್ಳುವಿರಾ? ನಮ್ಮ ಬಡದಿ ನೋಡಿದರೆ ಕುಡಿಯಲು ಮನಸ್ಸು ಬರುವುದೋ ಇಲ್ಲವೋ” ಎಂದಳು ಸುಮನಾ ಸಂಕೋಚಿಸುತ್ತ.

“ಹೌದಪ್ಪಾ, ಏನು ತೆಗೆದುಕೊಳ್ಳುತ್ತಿ?”

ಮೋಹಿನಿಯ ಪ್ರಶ್ನೆ ಹೊರಬೀಳುವುದರೊಳಗಾಗಿ ಎಲ್ಲಾ ಮಕ್ಕಳೂ ಸುತ್ತಮುತ್ತ ಕಲೆತು “ಅಂಕಲ್....ಅಂಕಲ್! ಏನಾದರೂ ತೆಗೆದುಕೊಳ್ಳಲೇ ಬೇಕು!”

“ಏನು ಕೊಡುತ್ತೀರಿ ಹೇಳಿ?”

“ಏನು ಕೊಡಲಿ. ನಿಮಗೇನು ಇಷ್ಟ?”

“ಏನಾದರೂ ಸರಿಯೆ ಸ್ವಲ್ಪ ಮಾತ್ರ ಸಾಕು.”

ಅವನ ಎತ್ತರದ ಶರೀರ ಹಿಮ್ಮೆರಳುತಿದ್ದರೆ ಐದು ಮಕ್ಕಳೂ ಹಿಂದೆ ಮುಂದೆ....ಸುತ್ತುವರಿದುಕೊಂಡೇ ಬಂದರು. ಮೋಹಿನಿಯ ಮನೆಯಲ್ಲಿ ಕಾಫಿಪುಡಿ ಮುಗಿದಿತ್ತು. ಸುಮನಾ ಕಾಫಿ ತಯಾರಿಸಿ ತಂದುಕೊಟ್ಟಳು. ಎಲ್ಲರ ಮನಃಪ್ರಾಣಗಳೂ ಸಂತಸದ ಅಲೆಯಿಂದ ತುಯ್ಯಲಾಡಿದುವು. ಆ ಕಾಫಿಯನ್ನು ಹೀರಿ ಕೆಲವೇ ನಿಮಿಷಗಳಲ್ಲಿ ತನ್ನ ಹಾದಿ ಹಿಡಿದ ಕಣ್ಮರೆಯಾದ ಡಾ॥ ಬಸಂತ್.

ಮಕ್ಕಳಿಗೆ ಮತ್ತು ಸುಮನಾ ಮೋಹಿನಿಯರಿಗೆ ಅವನ ಆಗಮನ ಮತ್ತು ನಿರ್ಗಮನ ಎಷ್ಟು ಹೊತ್ತು ಮಾತಿಗೆ ವಿಷಯವೋ. ಅನಂತರ ನನ್ನ ಜನ್ಮ ಯಾವ ಕೆಟ್ಟ ಗಳಿಗೆಯಲ್ಲಿ ಆಯಿತೋ ಅದಕ್ಕೇ ನರಕದ ಸಂಸಾರಕ್ಕೆ ಕಟ್ಟುಬಿದ್ದೆ. ಮಕ್ಕಳಾದರೂ ಸುಖವಾಗಿದ್ದರೆ ಸಾಕು ಎಂದುಕೊಂಡಳು ಮೋಹಿನಿ. ಎದೆಯಾಳದಿಂದ ನಿಟ್ಟುಸಿರೊಂದು ಸದ್ದಿಲ್ಲದೇ ಹೊರಹೊಮ್ಮಿತು.

* * *

ಶಾಲೆ ಮುಂಬೆಳೆಯಿತು. ಬಾಲವಾಡಿ, ಲೋವರ್ ಕೆ.ಜಿ., ಅಪ್ಪರ್ ಕೆ.ಜಿ., ಗಳಿಗೆ ಮಕ್ಕಳು ಭರ್ತಿಯಾದರು. ಹೊರಗಡೆಯಿಂದ ಬಂದು ಹೋಗುವ ಒಬ್ಬ ಉಪಾಧ್ಯಾಯಿನಿಯೂ ಇದ್ದಾಳೆ. ಯಾವಾಗಲಾದರೂ ಅಪರೂಪವಾಗಿ ಡಾ॥ ಬಸಂತ್ ಹಣಿಕಿ ಹೋಗುವ. ಮಕ್ಕಳ ಅಭ್ಯಾಸಕ್ಕೆ ಹಣದ ಅಗತ್ಯ ಇರಲಿಲ್ಲ ವಾದುದರಿಂದ ಅವರ ಪ್ರಸ್ತಾಪ ಬರಲಿಲ್ಲ. ಮಕ್ಕಳೂ ಓದುವುದರಲ್ಲಿ ತುಂಬಾ ಉತ್ಸುಕರಾಗಿದ್ದಾರೆ. ಅದೊಂದು ಸಮಾಧಾನ ಮನಸ್ಸಿಗೆ.

ಎರಡು ಮೂರು ವರ್ಷಗಳ ಅವಧಿ ಹೆಚ್ಚು ತ್ರಾಸದಾಯಕವಿಲ್ಲದೆ ಉರುಳಿಹೋಯಿತು.

ಆಗ ತಾನೆ ತರಗತಿಗಳು ಮುಗಿದು ಮಕ್ಕಳೆಲ್ಲಾ ಬುಳು ಬುಳು ಹೊರ ಬಿದ್ದರು. ಮಕ್ಕಳನ್ನು ಕರೆದೊಯ್ಯಲು ಬಂದವರಿಂದ ಶಾಲೆಯ ಆವರಣ ತುಂಬಿಹೋಗಿದೆ. ಅನೇಕರು ಆಗಲೇ ಹೊರಟು ಹೋಗಿದ್ದಾರೆ. ಕೆಲವರು ಹೋಗಲು ಹೊರಟಿದ್ದಾರೆ. ಇನ್ನೂ ಕೆಲವರು ಹೊರಡಲಿದ್ದಾರೆ. ಮೋಹಿನಿ ಒಳಗಡೆ ಊಟದ ತಯಾರಿ ನಡೆಸುತ್ತಿದ್ದಂತೆಯೇ ಎಲ್ಲಿಂದಲೋ ಗೋಪು ದಡದಡನೆ ಒಳ ಬಂದ. ಮೋಹಿನಿ ಬೆಕ್ಕಸ ಬೆರಗಾಗಿ ಹಿಂದೆ ಹಿಂದೆ ಸರಿದಳು.

"ಮೋಹಿನಿ! ಈಗಲೇ ಪೆಟ್ಟಿಗೆ ಕಟ್ಟು ಹೋಗೋಣ. ಹೂಂ, ಈಗಲೇ!"

"ನೀನು ಇಲ್ಲಿಗೆ ಹೇಗೆ ಬಂದೆ? ನೀನೇ ಈ ಕ್ಷಣ ಇಲ್ಲಿಂದ ಹೊರಟು ಹೋಗು!"

"ಅದೆಲ್ಲಾ ಇರಲಿ, ತಕ್ಷಣ ಪೆಟ್ಟಿಗೆ ಕಟ್ಟು!"

ದನಿಯ ಅಬ್ಬರ ಕೇಳಿ ಸುಮನಾ ಹೊರ ಬಂದಳು. ಮಾಲಿಯೂ ಬಂದ. ಜವಾನನೂ ಬಂದ. ಮಕ್ಕಳನ್ನು ಕರೆದೊಯ್ಯಲು ಬಂದಿದ್ದ ಅನೇಕರು ಆಶ್ಚರ್ಯ ಭರಿತರಾಗಿ ನೋಡತೊಡಗಿದರು. ಮೋಹಿನಿ ಜವಾನನನ್ನು ಕರೆದು "ಇವನನ್ನು ಕಾಂಪೌಂಡಿನಾಚೆಗೆ ದಬ್ಬು!" ಎಂದಳು ಒಡನೆ ಸುಮನಳೂ ಅದೇ ಮಾತು ಹೇಳಿದಳು.

ಆ ಕೂಡಲೇ ಕೋಪ ನಡುನೆತ್ತಿಗೇರಿದ ಗೋಪು ಮೋಹಿನಿಯ ಕೂದಲು ಹಿಡಿದು ದರದರ ಎಳೆದುಕೊಂಡಾಗ ಮಕ್ಕಳೆಲ್ಲಾ ಚಿಟಾರನೆ ಚೀರಿಕೊಂಡರು. ಮಾಲಿ ಮತ್ತು ಜವಾನ ಸಹಾಯಕ್ಕೆ ಬರುವುದರೊಳಗಾಗಿ ಬೆನ್ನಿಗೆ ದಡದಡ ಗುದ್ದಿಯೂ ಬಿಟ್ಟ. ಆ ಕೂಡಲೇ ಜವಾನ ಮತ್ತು ಮಾಲಿ ಅವನನ್ನು ಹಿಡಿದು ಬಗ್ಗು ಬಡಿದು ದರದರ ಎಳೆದುಕೊಂಡೊಯ್ದು ಪೋಲೀಸಿಗೆ ಒಪ್ಪಿಸಿದರು.

"ಛೀ! ನನ್ನನ್ನು ಮುಟ್ಟಿದನಲ್ಲಾ!" ಎಂದು ಚೀರಿದಳು ಮೋಹಿನಿ ಕಂಬನಿ ಸುರಿಸುತ್ತ.

ಅಲ್ಲಿದ್ದ ಹಿರಿಯರೆಲ್ಲಾ; ಮೋಹಿನಿಯನ್ನು ಸಮಾಧಾನಗೊಳಿಸಿ "ಅವನ ಧೂರ್ತತನಕ್ಕೆ ಸರಿಯಾದ ಶಿಕ್ಷೆ ಕೊಡಿಸಿ ತಕ್ಕ ಬಂದೋಬಸ್ತ್ ಮಾಡೋಣ!" ಎಂದರು.

ಆ ಪ್ರಕರಣದಿಂದ ಶಾಲೆಯ ಆವರಣದಲ್ಲಿ ದೊಡ್ಡ ಕೋಲಾಹಲವೆದ್ದಿತು. ಯಾರ ಮುಖ ನೋಡಿದರೂ ಕೋಪ–ತಾಪ–ದುಃಖ–ಬೇಸರ–ಹಾಹಾಕಾರಗಳಿಂದ ತುಂಬಿಹೋಯಿತು. ಅಷ್ಟೂ ಜನರ ಮುಂದೆ ಅದರಲ್ಲೂ ಪುಟ್ಟ ಪುಟ್ಟ ವಿದ್ಯಾರ್ಥಿಗಳ ಮುಂದೆ ಆದ ಅತೀವ ಅವಮಾನದಿಂದ ಕುಗ್ಗಿಹೋದಳು ಮೋಹಿನಿ. ಮನಃಪ್ರಾಣಗಳಲ್ಲಿ ಅವಮಾನದ ಝುರಿ ಹಾವಿನಂತೆ ಹರಿದಾಡ ತೊಡಗಿತು. ತನ್ನನ್ನು ತಾನು ಪ್ರಯತ್ನಪೂರ್ವವಾಗಿ ನಿಗ್ರಹಿಸಿಕೊಳ್ಳತೊಡಗಿದಳು.

ಭಾರಾತಿಭಾರವಾಗಿ ತೋರಿತು ಹೃದಯ; ನಿಜಕ್ಕೂ ಭಾರ; ಕಲ್ಲು ಹೊತ್ತಷ್ಟು ಭಾರ. ಮಕ್ಕಳು ಮತ್ತು ಸುಮನಾ ಬಳಿಯಿಂದ ಕದಲಲಿಲ್ಲ. ಚಿಕ್ಕವರಿಂದ ಹಿಡಿದು ದೊಡ್ಡವರವರೆಗೂ ಸಾಂತ್ವನ ನೀಡಿದ್ದಾರೆ; ಒಳ್ಳೆಯ ಮಾತು ಹೇಳಿ ಸಂತೈಸಿದ್ದಾರೆ.

ಆದರೆ....!

ಜುಟ್ಟು ಹಿಡಿದು ಗುದ್ದಿದ ಪ್ರಕರಣ ಅಳಿಸಲು ಸಾಧ್ಯವೇ? ಈ ಅವಮಾನ. ಈ ಅತ್ಯಾಚಾರ ಇವುಗಳಿಗೆ ಇತಿಮಿತಿ ಇದೆಯೇ? ಹೆಣ್ಣನ್ನು ಹೇಗೆಂದರೆ ಹಾಗೆ ಚೆಂಡಾಡಬಹುದೇ? ಮನುಷ್ಯರಾಗಿ ಹುಟ್ಟಿ ಧರ್ಮ ಪರಿಜ್ಞಾನ ಏನೇನೂ ಬೇಡವೇ? ಅಬಲೆಯರ ರಕ್ಷಣೆ ಇದೇ ಏನು? ಸ್ತ್ರೀಜನರ ಗೌರವಯುತ ಸ್ಥಾನಮಾನ ಇದೇ ಏನು? ನಾಗರಿಕ ವರ್ತಮಾನ ಯುಗಧರ್ಮ ಬೋಧಿಸುವುದು ಇದೇ ಏನು? ಹಿಂದೂಸ್ಥಾನ ಹಿಂದುಳಿದಿರುವುದೇಕೆ? ಪ್ರಪಂಚದ ನಾಗರಿಕ ರಾಷ್ಟ್ರಗಳು ನಾಗಾಲೋಟದಿಂದ ಮುಂದುವರಿಯುತ್ತಿರುವುದರ ಅರ್ಥವೇನು? ಅಲ್ಲಿ ಸ್ತ್ರೀಯರಿಗೆ ಸರ್ವಮಾನ್ಯತೆ ಇದೆ ಪುರುಷ ಸಮಾನತೆ ಇದೆ....ವೃದ್ಧಾಶ್ರಮಗಳಿದ್ದು

ವೃದ್ಧರ ಪರಿಪೋಷಣೆ ಇದೆ. ಯಾರೂ ಭಿಕ್ಷೆ ಬೇಡಬೇಕಾಗಿಲ್ಲ. ಮಕ್ಕಳಿಗೆ ಉತ್ತಮ ಶಾಲಾ ಜೀವನ ಮುಗಿಸುವುದರೊಳಗೇ ಗಳಿಕೆಯ ವಿಧಾನವನ್ನೂ ಕಲಿಸುತ್ತಾರೆ. ನಮ್ಮಲ್ಲಿ ಹೆಂಗಸರು ಮಕ್ಕಳು ಮುದುಕರುಗಳ ಮೇಲೆ ಯಾವತ್ತೂ ನಡೆಸುವುದು ದಬ್ಬಾಳಿಕೆಯೇ. ಸಂಜೀವನ ಪ್ರಜ್ಞೆ, ಧರ್ಮಪ್ರಜ್ಞೆ ಇಲ್ಲವೇ ಇಲ್ಲ. ಈ ದೇಶದಲ್ಲಿ ಹೆಂಗಸರು ಮಕ್ಕಳು ವೃದ್ಧರು ಎಂದು ಮುಕ್ಕಾಲುಭಾಗ ಜನ ಸಂಖ್ಯೆಯನ್ನು ಬದಿಗೊತ್ತಿದರೆ ಇನ್ನು ದುಡಿಯುವ ಕೈಗಳೆಷ್ಟು? ಆದರಲ್ಲೂ ಹಾಳು ಮೂಳು ಕಳೆದರೆ ಗಟ್ಟಿ ಸಂಖ್ಯೆಯೆಷ್ಟು? ನಮ್ಮ ದೇಶದ ದಾರಿದ್ರ್ಯಸ್ಥಿತಿಗೆ ಇದೇ ಕಾರಣ. ಪುರುಷ ವರ್ಗದ ಅನಾಚಾರ ಅತ್ಯಾಚಾರ ಒಂದು ರೀತಿಯದಾದರೆ, ಕಾಲಾನು ಕಾಲದಿಂದಲೂ ಸ್ತ್ರೀಯರನ್ನು ಅಂಧಕಾರದ ನರಕ ಕೂಪದಲ್ಲಿ ಕೂಡಿಟ್ಟು ಮತಿ ಮೌಢ್ಯಕ್ಕೆ ದಾರಿಮಾಡಿರುವುದು ಇನ್ನೊಂದು. ಪಾಪ....ಅಂದಿಂದಿಗೂ ದಾಸ್ಯಕ್ಕೆ ಸಿಕ್ಕಿದ ಸ್ತ್ರೀಯರಿಗೂ ನೋವುಣ್ಣುವುದು ಅಭ್ಯಾಸವಾಗಿದೆ....ಹೆಣ್ಣಾಗಿ ಹುಟ್ಟುವುದು ಜನ್ಮ ಜನ್ಮಾಂತರದ ಪಾಪವನ್ನು ತೀರಿಸುವುದಕ್ಕೆ ಎಂಬ ಮನೋಬಾವ ರಕ್ತಗತ....ಆತ್ಮಗತ.

ಪ್ರಸ್ತುತ ಪರಿಸ್ಥಿತಿ ಹೀಗಿರುವುದರಿಂದ ಈ ಜನಾಂಗ ಸಂಪೂರ್ಣ ನಾಶವಾದ ಹೊರತು ಹೊಸತಳಿಗೆ ಸರ್ವಪರಿಜ್ಞಾನ ಬರಲಾರದೇನೋ ಎಂಬಷ್ಟು ಅನುಮಾನ ಮೂಡಿದರೆ ತಪ್ಪಲ್ಲ.

ಆದರೆ, ಈ ಜೀವನಾನುಬಂದ ಅನಾದಿಯಿಂದಲೂ "ಆಸೆಯ ಸುಳಿಯಲ್ಲಿ" ಸಿಕ್ಕಿ ಇಂದಲ್ಲ ನಾಳೆಯಾದರೂ ಅಥವಾ ಮುಂದೆಯಾದರೂ ಜ್ಞಾನಪ್ರಜ್ಞೆ ಅರಳಿ ಒಳ್ಳಿತಾದೀತೇನೋ ಎಂಬ ಪ್ರತ್ಯಾಶಾಭಾವ ಮನ ಮನದಲ್ಲೂ ನೆತ್ತರಿನ ಕಣ ಕಣದಲ್ಲೂ ಹುಗಿದಿರುವುದಿರಿಂದ ಜೀವನ ಸಾಧನೆ ಎರಡರಿಂದಲೂ ನಡೆಯುತ್ತಿರುವುದು 'ಬರೀಜೀವನ.'

ಮೋಹಿನಿ ಮೂಕಮೌನಿಯಾಗಿ ಕುಳಿತೇ ಇದ್ದಾಳೆ. ತಲೆಯಲ್ಲಿ ವಿಚಾರ ಚಕ್ರಗಳು ಸುಳಿ ಸುತ್ತುತ್ತಲೇ ಇವೆ. ಅವಕ್ಕೆ ಕೊನೆ ಮೊದಲೇ ಇಲ್ಲ. ವಿಚಾರ ಸರಣಿಗಳೊಂದಿಗೆ ಹೊತ್ತೂ ಉರುಳುತ್ತಿದೆ. ಆತ್ಮ ಚಿಂತನೆ ಮುಂದುವರಿಯುತ್ತಿದೆ.

ಎಂದೋ ಓದಿದ ಸೂಕ್ತಿಯೊಂದು ಚಿತ್ತ ಭಿತ್ತಿ ಮೇಲೆ ಅಕ್ಷರಶಃ ಮೂಡಿತು.

ಅಧೋಽಧಃ ಪಶ್ಯತಃ ಕಸ್ಯ ಮಹಿಮಾ ನೋಪಚೀಯತೇ ।
ಉಪರ್ಯುಪರಿ ಪಶ್ಯಂತಃ ಸರ್ವ ಏವ ದರಿದ್ರತಾ ॥

ಮಂಗಳಂ

# ಮಲ್ಲಿಕಾ ಕೃತಿಗಳು

(ಕಾದಂಬರಿಗಳು)

೧. ಜೀವನಗಂಗಾ
೨. ಡಾ॥ ಅಘೋರ
೩. ಡಾ॥ ಕಮಲೇಶ್
೪. ವಂದೇ ಮಾತರಂ
೫. ಅನಂತಾನಂತದೆಡೆಗೆ
೬. ಮನೋನ್ಮಣಿ
೭. ಸಂತ್ರಾಸಿನಿ
೮. ಆಸೆಯ ಸುಳಿಯಲ್ಲಿ
೯. ಪದ್ಮಾಲಯ
೧೦. ಶ್ರದ್ಧಾಲಯ
೧೧. ಕಮಲಾನಿ ಕಥಾ
(ಕಥಾ ಸಂಕಲನ)
೧೨. ಬಹುರತ್ನಾವಸುಂಧರಾ
೧೩. ರತ್ನಗರ್ಭಾವಸುಂಧರಾ
೧೪. ಸುಧಾಮಣಿ
೧೫. ರಮಣೀಮಣಿ
೧೬. ಲಿಯೋನಾ
೧೭. ಶ್ರೀಮುಖಿ
೧೮. ಶ್ರೀಹರ್ಷಲಾ
೧೯. ವೈಶಾಖೀಪರ್ವ
೨೦. ಫಾಲ್ಗುಣೀಪರ್ವ
೨೧. ಮಣಿಮೇಖಲಾ
೨೨. ಮಣಿಕರ್ಣಿಕಾ
(ಕವಿತಾ ಸಂಕಲನ)
೨೩. ಪೂಜಾವಸಾನ ಸಮಯೇ....!
೨೪. ಧ್ಯಾನಾವಸಾನ ಸಮಯೇ....!
೨೫. ಗಗನ ಕುಸುಮ
೨೬. ಜೀವನ ಕುಸುಮ
೨೭. ಚಂಪಕರಾಜಿ
೨೮. ಬಕುಳ ರಾಜಿ
೨೯. ಕಸ್ತೂರಿ ಮಾಲಿಕಾ
೩೦. ಮಂದಾರ ಮಾಲಿಕಾ
೩೧. ವಿಜಯ ಗಾಥಾ
೩೨. ಗಾನ ತೀರ್ಥ
೩೩. ನಾದ ಬಿಂದು
೩೪. ಕಾವ್ಯಾನಂದ ನಂದಿನಿ
೩೫. ಭಾವಾನಂದ ನಂದಿನಿ
೩೬. ಸಂಗೀತ ಪುಷ್ಪಾಂಜಲಿ
೩೭. ಆತ್ಮ ಗೀತಾಂಜಲಿ
(ಸಂಜೀವನ ಕಾವ್ಯ)
೩೮. ಮಂಗಳ ಭಾರತಿ
೩೯. ಕಲ್ಯಾಣ ಭಾರತಿ
೪೦. ಉತ್ತರೋತ್ತರಣಿ
೪೧. ರಾಗಾನುರಾಗಿಣಿ
೪೨. ಪ್ರಫುಲ್ಲ ಭಾರತ
(ಪೌರಾಣಿಕ ನಾಟಕ)
೪೩. ಪುಣ್ಯಾಭಿಸಾರ
೪೪. ಪುಣ್ಯಪಯೋನಿಧಿ
(ಸಾನೆಟ್‌ಗಳು)
೪೫. ತರಂಗಿಣಿ
(ಗದ್ಯಕಾವ್ಯ)
೪೬. ಐಂದ್ರ ಕೀರ್ತಿ ಕೇತನಂ
(ಉಪನಿಷತ್ಕಥಾ)
೪೭. ಕೃತಂ ಸ್ಮರ ಕ್ರತುಂ ಸ್ಮರ
(ಶಿಶು ಸಾಹಿತ್ಯ)
೪೮. ದೂರ ದೇಶದಲ್ಲಿ
೪೯. ಬೆಳದಿಂಗಳ ರಾತ್ರಿ
೫೦. ರಂಗನ ಸಾಹಸ
೫೧. ಓಹಿಯೋಜ ಸರೋವರ
೫೨. ಕೌಶಿಕನ ಗೊಂಬೆ
೫೩. ವಿಶೇಷ ಸುದ್ದಿ
೫೪. ಕಲ್ಯಾಣ ರಾಗಿಣಿ
(ಮಹಾಕಾವ್ಯ)
೫೫. ಶ್ರೀ ವಿವೇಕಾನಂದ ವಿಜಯಂ